I ಅಲಂಕಾರ ನ್ಯಾಸ

II ದ್ಯೂತಕರ ಸಂವಾಹಕ

III ಸಂಧಿ ಛೇದ

IV ಮದನಿಕಾ ಶರ್ವಿಲಕ.

V ದುರ್ದಿನ

VI ಪ್ರವಹಣ ವಿಪರ್ಯಯ

VII ಆರ್ಯಕಾಪಹರಣ

VIII ವಸಂತಸೇನಾಮೋಟನ

IX ವ್ಯವಹಾರ

X ಸಂಹಾರ.

ಕರ್ಣಾಟಕ

# ಮೃಚ್ಛಕಟಿಕ ಪ್ರಕರಣಂ




ಆಸ್ಥಾನಕವಿ

ನಂಜನಗೂಡು ಸುಬ್ಬಶಾಸ್ತ್ರಿಗಳವರಿಂದ

ವಿರಚಿತವಾದುದು



ಮೈಸೂರು

ಗೌರ್ನಮೆಂಟ್ ಬ್ರಾಂಚ್ ಪ್ರೆಸ್ ಅಸಿಸ್ಟೆಂಟ್ ಸೂಪರಿಂಟಿಂಡೆಂಟರಿಂದ ಮುದ್ರಿಸಲ್ಪಟ್ಟಿತು

1940

# ಮುನ್ನುಡಿ

'ಕರ್ಣಾಟಕ ನಾಟಕ ನಿರ್ಮಾಪಕ' ರಾದ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ., ಮಹಾ ಪ್ರಭುಗಳವರು ಸಂಸ್ಕೃತದ ಶಾಕುಂತಲವನ್ನೂ ರತ್ನಾವಳಿಯನ್ನೂ ಕನ್ನಡದಲ್ಲಿ ಬರೆಯಿಸಿ, ಆಸ್ಥಾನದ ನಟವರ್ಗದ ಮೂಲಕ ಆಡಿಸಿದ ಬಳಿಕ, ಹಾಸ್ಯರಸಪ್ರಧಾನವೂ, ಸಾಮಾಜಿಕವೂ ಆದ ನಾಟಕವನ್ನು ಬರೆಯಬೇಕೆಂದು ಸಮ್ಮುಖದ ವಿದ್ವನ್ಮಂಡಲಿಗೆ ಆಜ್ಞಾಪಿಸಲು, ರಾಜಕುಮಾರಿಯರ ಪಾಠಶಾಲೆಯಲ್ಲಿ ಸಂಸ್ಕೃತಾಧ್ಯಾಪಕರಾಗಿದ್ದ, ಆಸ್ಥಾನ ಕವಿ ನಂಜನಗೂಡು ಸುಬ್ಬಶಾಸ್ತ್ರಿಗಳವರು–ನಮ್ಮ ತಾತಪಾದರವರು–ಶೂದ್ರಕಮಹಾಕವಿ ಪ್ರಣೀತವಾದ "ಸಂಸ್ಕೃತ ಮೃಚ್ಛಕಟಿಕಪ್ರಕರಣ" ವನ್ನು ರಂಗಭೂಮಿಗೆ ಅನುಕೂಲಿಸುವಂತೆ ಕನ್ನಡಿಸಿ ಸಮರ್ಪಿಸಿದರು. ಇದರ ಅಭಿನಯವನ್ನು ಪರಾಮರ್ಶಿಸಿ ಪ್ರಭುಗಳವರು ಅತ್ಯಂತ ಸಂತುಷ್ಟರಾಗಿ ಕವಿಗೆ ತಮ್ಮ ಮೆಚ್ಚುಗೆಯನ್ನಿತ್ತು ಗೌರವಿಸಿದರು. ಈ ಗ್ರಂಥವು ಇದುವರೆಗೂ ಅಮುದ್ರಿತವಾಗಿ ಅರಮನೆಯ ಸರಸ್ವತೀ ಭಾಂಡಾಗಾರದಲ್ಲಿ ಅಡಗಿದ್ದಿತು. ನಮ್ಮ ಮಹಾಪ್ರಭುಗಳವರು ಇದನ್ನು ಮುದ್ರಣಗೊಳಿಸಬೇಕೆಂದು ಅಪ್ಪಣೆಯಿತ್ತುದರಿಂದ ಲೇಖಕಪ್ರಮಾದಜನಿತದೋಷಗಳನ್ನು ತಿದ್ದಿ ಮಾತೃಕೆಗೆ ಸರಿಪಡಿಸಿ ಸನ್ನಿಧಾನದಲ್ಲಿ ಸಮರ್ಪಿಸಿರುವೆನು.

ಶುಕ್ಲ ಶ್ರಾವಣ ಕೃಷ್ಣಾಷ್ಟಮೀ
ಸೌಮ್ಯವಾಸರ, ಮೈಸೂರು.

ನಂ. ಶ್ರೀಕಂಠಶಾಸ್ತ್ರಿ,
ಆಸ್ಥಾನ ವಿದ್ವಾನ್.

॥ ದೇವದ್ವಿಜನರೇಂದ್ರಾಣಾಂ ಲಿಂಗಿನಾಂ ಸಂಸ್ಕೃತಂ ವಚಃ ॥

# ಇದರಲ್ಲಿ ಬರುವ ಪಾತ್ರಗಳು

1 ಚಾರುದತ್ತ .... ಕಥಾನಾಯಕ (ಬಡತನಕ್ಕೆ ಗುರಿಯಾದ ಒಬ್ಬ ಸಾಹುಕಾರ).
2 ಮೈತ್ರೇಯ .... ವಿದೂಷಕ (ಚಾರುದತ್ತನ ಸ್ನೇಹಿತ). ಪ್ರಾಚ್ಯಭಾಷಾ (ಪ್ರಾ)
3 ಶಕಾರ (ರಾಷ್ಟ್ರಿಯಃ) .... ಚಾರುದತ್ತನ ವೈರಿ (ಪಾಲಕನೆಂಬ ದೊರೆಯ ಭಾವಮೈದುನ). ಶಕಾರೀಭಾಷಾ (ಅ)
4 ವಿಟ .... .... ಶಕಾರನ ಮಿತ್ರ.
5 ಚೇಟ .... .... ಶಕಾರನ ಭೃತ್ಯ.
6 ವಸಂತಸೇನೆ .... ಕಥಾನಾಯಿಕೆ (ಚಾರುದತ್ತನ ವೇಶ್ಯೆ). ಶೌರಸೇನೀ (ಪ್ರಾ)
7 ರದನಿಕೆ .... .... ಚಾರುದತ್ತನ ಮನೆಯ ದಾಸಿ. ಶೌರಸೇನೀ (ಪ್ರಾ)
8 ಸಂವಾಹಕ (ಭಿಕ್ಷು) .... ಜೂಜಿನಲ್ಲಿ ಸೋತು ಜೈನಸನ್ಯಾಸಿಯಾದವನು. ಮಾಗಧೀ (ಪ್ರಾ)
9 ಮಾಥುರ .... ಒಬ್ಬ ಜೂಜುಗಾರ. ಢಕ್ಕಭಾಷಾ (ಅ)
10 ಸಭಿಕ (ದ್ಯೂತಕರ) .... ಜೂಜಿನ ಮನೆಯ ಗೊತ್ತುಗಾರ. ಢಕ್ಕಭಾಷಾ (ಅ)
11 ದರ್ದುರಕ .... ಮತ್ತೊಬ್ಬ ಜೂಜುಗಾರ.
12 ಕುಂಭೀಲಕ .... ವಸಂತಸೇನೆಯ ಮನೆಯ ಭೃತ್ಯ. ಮಾಗಧೀ (ಪ್ರಾ)
13 ವರ್ಧಮಾನಕ .... ಚಾರುದತ್ತನ ಬಂಡಿಯಾಳು. ಮಾಗಧೀ (ಪ್ರಾ)
14 ಶರ್ವಿಳಕ .... ಮದನಿಕೆಯ ಮನೋವಲ್ಲಭ.
15 ಮದನಿಕೆ .... ವಸಂತಸೇನೆಯ ದಾಸಿ. ಶೌರಸೇನೀ (ಪ್ರಾ)
16 ಧೂತಾದೇವಿ .... ಚಾರುದತ್ತನ ಪತ್ನಿ. ಶೌರಸೇನೀ (ಪ್ರಾ)
17 ರೋಹಸೇನ .... ಚಾರುದತ್ತನ ಮಗ. ಮಾಗಧೀ (ಪ್ರಾ)
18 ಸ್ಥಾವರಕ .... ಶಕಾರನ ಬಂಡಿಯಾಳು. ಮಾಗಧೀ (ಪ್ರಾ)
19 ಆರ್ಯಕ .... ಪಾಲಕನೆಂಬ ದೊರೆಯನ್ನು ಕೊಂದು ಉಜ್ಜಯನಿಗೆ ರಾಜನಾದವನು.
20 ವೀರಕ }
21 ಚಂದನಕ } .... ಪೋಲೀಸರ ಗೊತ್ತುಗಾರರು. ಅವಂತಭಾಷಾ (ಪ್ರಾ)
22 ಶೋಧನಕ .... ನ್ಯಾಯಸ್ಥಾನದ ಆಳು. ಶೌರಸೇನೀ (ಪ್ರಾ)
23 ವೃದ್ಧೆ .... .... ವಸಂತಸೇನೆಯ ತಾಯಿ. ಶೌರಸೇನೀ (ಪ್ರಾ)
24 ಭದ್ರಕ .... .... ಪೋಲೀಸ್ ಕಾವಲುಗಾರ.
25 ಆಹಿಂತಕ }
26 ಗೋಹ } .... ಚಂಡಾಲರು. ಚಾಂಡಾಲೀಭಾಷಾ (ಅ)

ಇವರಲ್ಲದೆ ಸೂತ್ರಧಾರ, ನಟಿ, ನ್ಯಾಯಾಧಿಪತಿ, ಲೇಖಕ, ಚೇಟಿ—ಇವರ ಪ್ರವೇಶ.

ಶೌರಸೇನೀ (ಪ್ರಾ) ——— ಶೌರಸೇನೀ (ಪ್ರಾ)

ಶ್ರೀ

# ಮೃಚ್ಛಕಟಿಕಮ್.

## ಪ್ರಥಮೋಽಂಕಃ

ಪರ್ಯಂಕಗ್ರಂಥಿಬಂಧದ್ವಿಗುಣಿತಭುಜಗಾಶ್ಲೇಷಸಂವೀತಜಾನೋ-
ರಂತಃ ಪ್ರಾಣಾವರೋಧವ್ಯುಪರತಸಕಲಜ್ಞಾನರುದ್ಧೇಂದ್ರಿಯಸ್ಯ ।
ಆತ್ಮನ್ಯಾತ್ಮಾನಮೇವ ವ್ಯಪಗತಕರಣಂ ಪಶ್ಯತಸ್ತತ್ತ್ವದೃಷ್ಟ್ಯಾ
ಶಂಭೋರ್ವಃ ಪಾತು ಶೂನ್ಯೇಕ್ಷಣಘಟಿತಲಯಬ್ರಹ್ಮಲಗ್ನಃ ಸಮಾಧಿಃ ॥

ಅಪಿ ಚ ।

ಪಾತು ವೋ ನೀಲಕಂಠಸ್ಯ ಕಂಠಃ ಶ್ಯಾಮಾಂಬುದೋಪಮಃ ।
ಗೌರೀಭುಜಲತಾ ಯತ್ರ ವಿದ್ಯುಲ್ಲೇಖೇವ ರಾಜತೇ ॥

( ನಾಂದ್ಯಂತೇ । )

ಸೂತ್ರಧಾರಃ — ಅಲಮನೇನ ಪರಿಷತ್ಕುತೂಹಲವಿಮರ್ದಕಾರಿಣಾ ಪರಿಶ್ರಮೇಣ । ಏವಮಹಮಾರ್ಯಮಿಶ್ರಾನ್ ಪ್ರಣಿಪತ್ಯ ವಿಜ್ಞಾಪಯಾಮಿ - ಯದಿದಂ ವಯಂ ಮೃಚ್ಛಕಟಿಕಂ ನಾಮ ಪ್ರಕರಣಂ ಪ್ರಯೋಕ್ತುಂ ವ್ಯವಸಿತಾಃ । ಏತತ್ಕವಿಃ ಕಿಲ

ದ್ವಿರದೇಂದ್ರಗತಿಶ್ಚಕೋರನೇತ್ರಃ ಪರಿಪೂರ್ಣೇಂದುಮುಖಃ ಸುವಿಗ್ರಹಶ್ಚ ।
ದ್ವಿಜಮುಖ್ಯತಮಃ ಕವಿರ್ಬಭೂವ ಪ್ರಥಿತಃ ಶೂದ್ರಕ ಇತ್ಯಗಾಧಸತ್ತ್ವಃ ॥

ಅಪಿ ಚ ।

ಋಗ್ವೇದಂ ಸಾಮವೇದಂ ಗಣಿತಮಥ ಕಲಾಂ ವೈಶಿಕೀಂ ಹಸ್ತಿಶಿಕ್ಷಾಂ
ಜ್ಞಾತ್ವಾ ಶರ್ವಪ್ರಸಾದಾತ್ ವ್ಯಪಗತತಿಮಿರೇ ಚಕ್ಷುಷೀ ಚೋಪಲಭ್ಯ ।
ರಾಜಾನಂ ವೀಕ್ಷ್ಯ ಪುತ್ರಂ ಪರಮಸಮುದಯೇನಾಶ್ವಮೇಧೇನ ಚೇಷ್ಟ್ವಾ
ಲಬ್ಧ್ವಾ ಚಾಯುಃ ಶತಾಬ್ದಂ ದಶದಿನಸಹಿತಂ ಶೂದ್ರಕೋಽಗ್ನಿಂ ಪ್ರವಿಷ್ಟಃ ॥

ಅಪಿ ಚ ।

ಸಮರವ್ಯಸನೀ ಪ್ರಮಾದಶೂನ್ಯಃ ಕಕುದಂ ವೇದವಿದಾಂ ತಪೋಧನಶ್ಚ ।
ಪರವಾರಣಬಾಹುಯುದ್ಧಲುಬ್ಧಃ ಕ್ಷಿತಿಪಾಲಃ ಕಿಲ ಶೂದ್ರಕೋ ಬಭೂವ ॥

ಅಸ್ಯಾಂ ಚ ತತ್ಕೃತೌ

ಅವಂತಿಪುರ್ಯಾಂ ದ್ವಿಜಸಾರ್ಥವಾಹೋ ಯುವಾ ದರಿದ್ರಃ ಕಿಲ ಚಾರುದತ್ತಃ ।
ಗುಣಾನುರಕ್ತಾ ಗಣಿಕಾ ಚ ಯಸ್ಯ ವಸಂತಶೋಭೇವ ವಸಂತಸೇನಾ ॥



ಶ್ರೀ

ಕರ್ಣಾಟಕ

# ಮೃಚ್ಛಕಟಿಕ ಪ್ರಕರಣಂ

## ಪ್ರಸ್ತಾವನೆ

ಸೂತ್ರಧಾರ—(ಪ್ರವೇಶಿಸಿ, ಕೈಮುಗಿದು)

ಕಂದ ॥ ಸೆಳೆಮಿಂಚಿನಂತೆ ಗೌರಿಯ ।
ನಳಿತೋಳಾವುದರೊಳೊಪ್ಪುತಿರ್ಕುಮೊ ಶಿವನಾ ॥
ತೊಳಗುವ ನೀಲಾಂಬುದನಿಭ ।
ಗಳಮದು ಪಾಲಿಕ್ಕೆ ನಮ್ಮನೆಂದುಂ ಶುಭದಂ ॥

ರಾಗ ॥ ತಾಳ ॥

ಶಿಖರಿನಂದಿನಿ । ಶ್ರಿತಜನತಾಜನನಿ ॥ ಪ ॥
ಮುಖವಿಹಸಿತಚಂದ್ರರುಚೆ । ಮಧುತರನೀಲಕಚೆ ॥ ಅ ॥ ಪ ॥
ಕರುಣಾಸಾರಮಯ । ಕುವಲಯನಿಭನೇತ್ರಕಲಿತೆ ।
ಸುರವರವನಿತಾಚಿಕುರ । ಸುಮಮಹಿತಾಂಘ್ರಿಯುತೆ ॥ ೧ ॥
ದಿವಿಜಾರಾತಿಮದದಮನಚತುರೆಪಾಹಿಲಲಿತೆ ।
ನವಜಲದಸತ್ಕಬರಿ । ನಳಿನಭವಾದಿನುತೆ ॥ ೨ ॥
ಸಕಲಾಧಾರನಿಜಚರಣಸಹಜ ಕೃಪಾಶಾಲಿನಿಶಿವೆ ।
ಸುತವಿಲಸಿತಚಾಮನೃಪ ಸದಯಹೃದಂಬುಭವೆ ॥ ೩ ॥

ಸಾಮಾಜಿಕರ ಕುತೂಹಲವನ್ನು ಭಂಗಪಡಿಸುವ ಈ ಕಾಲಹರಣದಿಂದೇನು ಪ್ರಯೋಜನ? ಸಭಾಸದರಿಗೆ ನಮಸ್ಕರಿಸಿ ಹೀಗೆ ಬೇಡಿಕೊಳ್ಳುವೆನು. ಅಯ್ಯಾ ಸಭಾಸದರೆ! ಶೂದ್ರಕಮಹಾಕವಿಯಿಂದ ವಿರಚಿತವಾದ ಮೃಚ್ಛಕಟಿಕವೆಂಬ ಪ್ರಕರಣವನ್ನು ಆಸ್ಥಾನಕವಿ ನಂಜನಗೂಡು ಸುಬ್ಬಶಾಸ್ತ್ರಿಗಳು ಕರ್ಣಾಟಭಾಷೆಯಲ್ಲಿ ವಿರಚಿಸಿರುವರು. ಅದನ್ನು ಅಭಿನಯಿಸ

ಬೇಕೆಂದು ನಮಗೆ ಬಹಳ ಕುತೂಹಲವಿರುವುದು. ತಮ್ಮ ಕೃಪಾಕಟಾಕ್ಷದಿಂದ ನಮ್ಮ ಕುತೂಹಲವನ್ನು ಸಫಲಮಾಡಬೇಕು. (ತೆರೆಯಕಡೆ ನೋಡಿ) ಇದೇನು ? ಗಾಯಕರೆಲ್ಲರೂ ಎಲ್ಲಿ ಹೋಗಿದ್ದಾರು ? ನಮ್ಮ ಸಂಗೀತಶಾಲೆಯು ಶೂನ್ಯವಾಗಿರುವುದಲ್ಲಾ. (ಯೋಚಿಸಿ) ಆಃ ! ತಿಳಿಯಿತು.

ಕಂದ ॥ ಶೂನ್ಯಮಪುತ್ರನ ಮನೆ ಚಿರ ।
ಶೂನ್ಯಂ ಸನ್ಮಿತ್ರಹೀನ ನಿಲಯಂ ದೆಸೆಗಳ್ ॥
ಶೂನ್ಯಂ ಮೂರ್ಖಂಗಾರಯೆ ।
ಶೂನ್ಯಂ ಸರ್ವಂ ದರಿದ್ರನಾದಂಗಿಳೆಯೊಳ್ ॥

ಗಾನಮಾಡಿದುದಾಯಿತು. ಕ್ಷುತ್ತಿನಿಂದ ದೇಹವೆಲ್ಲ ಶುಷ್ಕವಾಗಿರುವುದು. ಬಹಳಹೊತ್ತು ಗಾನಮಾಡಿದ ನನಗೆ ಕಣ್ಣುಗತ್ತಲೆ ಹಿಡಿದುಕೊಂಡು ಬರುತ್ತಿರುವುದು. ಆದುದರಿಂದ ಸ್ವಲ್ಪತಂಗಳನ್ನವಾದರೂ ಮಿಕ್ಕಿರುವುದೊ, ಇಲ್ಲವೊ, ಎಂದು ನನ್ನ ಹೆಂಡತಿಯನ್ನು ಕರೆದು ಕೇಳುವೆನು. (ಸ್ವಲ್ಪದೂರ ಹೋಗಿ ನೋಡಿ) ಇದೇ ನಮ್ಮ ಮನೆ. (ನೋಡಿ) ಇದೇನಾಶ್ಚರ್ಯ ! ನಮ್ಮ ಮನೆಯ ಆಡಳಿತವೇ ಬೇರೆ ವಿಧವಾಗಿ ತೋರುವುದಲ್ಲಾ ! ನಮ್ಮ ಮನೆಯಿಂದ ಹೊರಟ ಕಲಗಚ್ಚು, ಗಂಜಿ ಇವು ಕಾಲುವೆಯ ಹಾಗೆ ಹರಿಯುತ್ತಿವೆ. ಕೆಲವರು ಹೂವನ್ನು ಕಟ್ಟುತ್ತಿರುವರು. ಕೆಲವರು ಗಂಧವನ್ನು ತೇಯುತ್ತಿರುವರು. ಇದಕ್ಕೆ ಕಾರಣವೇನೋ ? ಒಳ್ಳೆಯದು, ನನ್ನ ಹೆಂಡತಿಯನ್ನೇ ಕರೆದು ಕೇಳಿ ತಿಳಿದುಕೊಳ್ಳುವೆನು. (ತೆರೆಯಕಡೆ ನೋಡಿ) ಆರ್ಯಳೆ, ಆರ್ಯಳೆ !

ನಟಿ—(ಬಂದು) ಆರ್ಯನೆ, ಇದೊ, ಬಂದೆನು. ಏನಪ್ಪಣೆ ? ಆಜ್ಞಾಪಿಸಬೇಕು.

ಸೂತ್ರಧಾರ—ಬಹುಕಾಲ ಗಾನಮಾಡಿ ಹಸಿವಿನಿಂದ ಗ್ರೀಷ್ಮಕಾಲದ ತಾವರೆಯ ಬೀಜದಂತೆ ನನ್ನ ಅಂಗಗಳೆಲ್ಲ ಶೋಷಿಸಿಹೋಗಿರುವುವು. ಏನಾದರೂ ತಿನ್ನುವುದಕ್ಕಿರುವುದೊ ?

ನಟಿ—ಆರ್ಯನೆ, ಸಮಸ್ತವೂ ಇದೆ.

ಸೂತ್ರಧಾರ—ಏನೇನಿರುವುದು ?

ತಯೋರಿದಂ ಸತ್ಸುರತೋತ್ಸವಾಶ್ರಯಂ ನಯಪ್ರಚಾರಂ ವ್ಯವಹಾರದುಷ್ಟತಾಂ ।
ಖಲಸ್ವಭಾವಂ ಭವಿತವ್ಯತಾಂ ತಥಾ ಚಕಾರ ಸರ್ವಂ ಕಿಲ ಶೂದ್ರಕೋ ನೃಪಃ ॥

(ಪರಿಕ್ರಮ್ಯಾವಲೋಕ್ಯ ಚ ।) ಅಯೇ, ಶೂನ್ಯೇಯಮಸ್ಮತ್ಸಂಗೀತಶಾಲಾ । ಕ್ವನು ಗತಾಃ ಕುಶೀಲವಾ ಭವಿಷ್ಯಂತಿ । (ವಿಚಿಂತ್ಯ) ಆಂ, ಜ್ಞಾತಂ

ಶೂನ್ಯಮಪುತ್ರಸ್ಯ ಗೃಹಂ ಚಿರಶೂನ್ಯಂ ನಾಸ್ತಿ ಯಸ್ಯ ಸನ್ಮಿತ್ರಂ ।
ಮೂರ್ಖಸ್ಯ ದಿಶಃ ಶೂನ್ಯಾಃ ಸರ್ವಂ ಶೂನ್ಯಂ ದರಿದ್ರಸ್ಯ ॥ ೮ ॥

ಕೃತಂ ಚ ಸಂಗೀತಕಂ ಮಯಾ । ಅನೇನ ಚಿರಸಂಗೀತೋಪಾಸನೇನ ಗ್ರೀಷ್ಮಸಮಯಪ್ರಚಂಡದಿನಕರಕಿರಣೋಚ್ಛುಷ್ಕಪುಷ್ಕರಬೀಜಮಿವ ಪ್ರಚಲಿತತಾರಕೇ ಕ್ಷುಧಾ ಮಮಾಕ್ಷಿಣೀ ಖಟಖಟಾಯೇತೇ । ತದ್ಯಾವದ್ಗೃಹಿಣೀಮಾಹೂಯ ಪೃಚ್ಛಾಮಿ, ಅಸ್ತಿ ಕಿಂಚಿತ್ ಪ್ರಾತರಾಶೋ ನ ವೇತಿ । ಏಷೋಽಸ್ಮಿ ಭೋಃ, ಕಾರ್ಯವಶಾತ್ ಪ್ರಯೋಗವಶಾಚ್ಚ ಪ್ರಾಕೃತಭಾಷೀ ಸಂವೃತ್ತಃ । ಅವಿದ ಅವಿದ ಭೋಃ, ಚಿರಸಂಗೀತೋಪಾಸನೇನ ಶುಷ್ಕಪುಷ್ಕರನಾಲಾನೀವ ಮೇ ಬುಭುಕ್ಷಯಾ ಮ್ಲಾನಾನ್ಯಂಗಾನಿ । ತದ್ಯಾವದ್ಗೃಹಂ ಗತ್ವಾ ಜಾನಾಮಿ, ಅಸ್ತಿ ಕಿಮಪಿ ಕುಟುಂಬಿನ್ಯಾ ಉಪಪಾದಿತಂ ನ ವೇತಿ । (ಪರಿಕ್ರಮ್ಯಾವಲೋಕ್ಯ ಚ) ಇದಂ ತದಸ್ಮಾಕಂ ಗೃಹಂ । ತತ್ಪ್ರವಿಶಾಮಿ । (ಪ್ರವಿಶ್ಯಾವಲೋಕ್ಯ ಚ) ಆಶ್ಚರ್ಯಂ ಕಿಂ ನು ಖಲ್ವಸ್ಮಾಕಂ ಗೃಹೇಽನ್ಯದಿವ ಸಂವಿಧಾನಕಂ ವರ್ತತೇ । ಆಯಾಮಿತಂಡುಲೋದಕಪ್ರವಾಹಾ ರಥ್ಯಾ ಲೋಹಕಟಾಹಪರಿವರ್ತನಕೃಷ್ಣಸಾರಾ ಕೃತವಿಶೇಷಕೇವ ಯುವತಿರಧಿಕತರಂ ಶೋಭತೇ ಭೂಮಿಃ । ಸ್ನಿಗ್ಧಗಂಧೇನೋದ್ದೀಪ್ಯಮಾನೇವಾಧಿಕಂ ಬಾಧತೇ ಮಾಂ ಬುಭುಕ್ಷಾ । ತತ್ಕಿಂ ಪೂರ್ವಾರ್ಜಿತಂ ನಿಧಾನಮುಪಲಬ್ಧಂ ಭವೇತ್ । ಅಥವಾಹಮೇವ ಬುಭುಕ್ಷಿತೋಽನ್ನಮಯಂ ಜೀವಲೋಕಂ ಪಶ್ಯಾಮಿ । ನಾಸ್ತಿ ಕಿಲ ಪ್ರಾತರಾಶೋಽಸ್ಮಾಕಂ ಗೃಹೇ । ಪ್ರಾಣಾಧಿಕಂ ಬಾಧತೇ ಮಾಂ ಬುಭುಕ್ಷಾ । ಇಹ ಸರ್ವಂ ನವಂ ಸಂವಿಧಾನಕಂ ವರ್ತತೇ । ಏಕಾ ವರ್ಣಕಂ ಪಿನಷ್ಟಿ । ಅಪರಾ ಸುಮನಸೋ ಗ್ರಥ್ನಾತಿ । (ವಿಚಿಂತ್ಯ) ಕಿಮಿದಂ । ಭವತು । ಕುಟುಂಬಿನೀಂ ಶಬ್ದಾಯ್ಯ ಪರಮಾರ್ಥಂ ಜ್ಞಾಸ್ಯಾಮಿ । (ನೇಪಥ್ಯಾಭಿಮುಖಮವಲೋಕ್ಯ) ಆರ್ಯೇ ಇತಸ್ತಾವತ್

ನಟೀ— ಆರ್ಯ ಇಯಮಸ್ಮಿ ।
ಸೂತ್ರಧಾರಃ— ಆರ್ಯೇ ಸ್ವಾಗತಂ ತೇ ।
ನಟೀ— ಆಜ್ಞಾಪಯತ್ವಾರ್ಯಃ ಕೋ ನಿಯೋಗೋಽನುಷ್ಠೀಯತಾಮಿತಿ
ಸೂತ್ರಧಾರಃ— ಆರ್ಯೇ ('ಚಿರಸಂಗೀತೋಪಾಸನೇನ' ಇತ್ಯಾದಿ ಪಠಿತ್ವಾ) ಅಸ್ತಿ ಕಿಮಸ್ಮಾಕಂ ಗೇಹೇ ಆಶಿತವ್ಯಂ ನ ವೇತಿ ।
ನಟೀ— ಆರ್ಯ ಸರ್ವಮಸ್ತಿ ।
ಸೂತ್ರಧಾರಃ— ಕಿಂ ಕಿಮಸ್ತಿ ।

ನಟೀ — ತದ್ಯಥಾ - ಗುಡೋದನಂ ಘೃತಂ ದಧಿ ತಂಡುಲಾಃ ಆರ್ಯೇಣ ಭೋಕ್ತವ್ಯಂ
ರಸಾಯನಂ ಸರ್ವಮಸ್ತೀತಿ। ಏವಂ ತವ ದೇವಾ ಆಶಾಸಂತಾಂ।
(ಸಂಸ್ಕೃತ ಪಾಠ್ಯಪಾಠಃ)

ಸೂತ್ರಧಾರ:- ಕಿಮಸ್ಮದ್ಗೇಹೇ ಸರ್ವಮಸ್ತಿ। ಅಥವಾ ಪರಿಹಸಸಿ।

ನಟೀ —(ಸ್ವಗತಂ) ಪರಿಹಸಿಷ್ಯಾಮಿ ತಾವತ್। ಆರ್ಯ, ಅಸ್ತ್ಯಾಪಣೇ।

ಸೂತ್ರಧಾರ:-(ಸಕ್ರೋಧಂ) ಆಃ ಅನಾರ್ಯೇ, ಏವಂ ತವಾಪಿ ಭವಿಷ್ಯತಿ। ಅಭಾವಂ ಚ
ಗಮಿಷ್ಯಸಿ। ಯದಿದಾನೀಂ ಮಾಂ ವರಂಡಲಂಬುಕ ಇವ ಊರ್ಧ್ವಮಾರೋಪ್ಯ ಪಾತಿತವತೀ।
(ವರಂಡೋಽಲಂಬೀಷ್ವಗ್ರಸ್ಥಂ ತನ್ಮಲಂಬುಕಃ ತತ್ಪ್ರಾಂತನಿಬದ್ಧೋ ಮೃತ್ತಿಕಾಪಿಂಡಃ)
(ಕೇಬದಾಳು:- ವರೇಂ(ಡ)ದ ಇಟ್ಟಿಗೆಗಳ ಉಪ್ಪರಿಗೆಯ ಮಾಳಿಗೆ ಭಿತ್ತಿ ಪ್ರದೇ
ತತ್ರಲಂಬಕೋಽವಲಂಬ ಭಾಗ ಇಟ್ಟಿಗೆಸಂಘಃ ಪೋಲಿ ಅಸಂಯೋಗನಾರ್ಥಂ ಮೂರಂ
ಉಪಕ್ರಮ್ಯತೇ। ಅನಂತರಂ ನಿಪತತ್ಯಪೀತಿ).

ನಟೀ — ಮರ್ಷಯತು ಮರ್ಷಯತ್ವಾರ್ಯಃ। ಪರಿಹಾಸಃ ಖಲ್ವೇಷಃ।

ಸೂತ್ರಧಾರ:- ತತ್ಕಿಂ ಪುನರಿದಂ ನವಮಿವ ಸಂವಿಧಾನಕಂ ವರ್ತತೇ ಏತಾ ಗಂಧಂ
ಪಿನಷ್ಟಿ। ಅಪರಾ ಸುಮನಸೋ ಗುಂಫತಿ। ಇಯಂ ಚ ಪಂಚವರ್ಣ
ಕುಸುಮೋಪಹಾರ ಶೋಭಿತಾ ಭೂಮಿಃ।

ನಟೀ — ಅದ್ಯೋಪವಾಸೋ ಗೃಹೀತಃ

ಸೂತ್ರಧಾರ:- ಕಿಂ ನಾಮಧೇಯೋಽಯಮುಪವಾಸಃ

ನಟೀ - ಅಭಿರೂಪಪತಿರ್ನಾಮ।

ಸೂತ್ರಧಾರ:- ಆರ್ಯೇ, ಇಹಲೌಕಿಕೋಽಥವಾ ಪಾರಲೌಕಿಕಃ

ನಟೀ - ಆರ್ಯ ಪಾರಲೌಕಿಕಃ।

ಸೂತ್ರಧಾರ:- (ಸರೋಷಂ) ಪ್ರೇಕ್ಷಂತಾಂ ಪ್ರೇಕ್ಷಂತಾಂ ಮಹಾರ್ಯಮಿಶ್ರಾಃ। ಮಮ ಗೇಹಿನ್ಯಾ
ಭಕ್ತ (ಭಕ್ತ) ಪರಿವ್ಯಯೇನ ಪಾರಲೌಕಿಕೋ ಭರ್ತಾನ್ವಿಷ್ಯತೇ।
(ಭಕ್ತ = ಓದನ)

ನಟೀ — ಆರ್ಯ, ಪ್ರಸೀದ ಪ್ರಸೀದ। ತ್ವಮೇವ ಜನ್ಮಾಂತರೇ ಭವಿಷ್ಯಸೀತಿ।

ಸೂತ್ರಧಾರ:- ಅಯಮುಪವಾಸಃ ಕೇನ ತವೋಪದಿಷ್ಟಃ

ನಟೀ — ಆರ್ಯಸ್ಯೈವ ಪ್ರಿಯವಯಸ್ಯೇನ ಜೂರ್ಣವೃದ್ಧೇನ।

ನಟಿ—ಬೆಲ್ಲದನ್ನ, ತುಪ್ಪ, ಮೊಸರು, ಉಂಡೆ, ಇನ್ನೂ ನಿನಗೆ ಬೇಕಾದ ರಸಾಯನ ಮುಂತಾದುವೆಲ್ಲಾ ಇರುವುವು

ಸೂತ್ರಧಾರ—ಏನು ! ನಮ್ಮ ಮನೆಯಲ್ಲಿಯೇ ಇರುವುವೊ ? ಅಥವಾ ಹಾಸ್ಯಮಾಡುವೆಯೋ ?

ನಟಿ—(ಸ್ವಗತ) ಸ್ವಲ್ಪ ಹಾಸ್ಯಮಾಡುವೆನು. ಏಕೆಂದರೆ ಪುರುಷರಿಗೆ ಸ್ವಭಾವವಾಗಿ ಹೊಟ್ಟೆ ಹಸಿದ ಹೊತ್ತಿನಲ್ಲಿ ಕೋಪ ಹೆಚ್ಚಷ್ಟೆ ? (ಪ್ರಕಾಶ) ಆರ್ಯನೆ, ಎಲ್ಲವೂ ಅಂಗಡಿಯಲ್ಲಿರುವುದು.

ಸೂತ್ರಧಾರ—(ಕೋಪದಿಂದ) ಆಃ ! ನೀಚಳೆ ! ನನ್ನನ್ನು ಹೀಗೆ ಲಕ್ಷಿಸದೆ ಹಾಸ್ಯಮಾಡಿದುದರಿಂದ ಇನ್ನುಮೇಲೆ ನಾನು ನಿನ್ನಾಸೆಯನ್ನೇ ಬಿಡುವೆನು. ಇನ್ನು ನೀನು ನಾಶವನ್ನು ಹೊಂದುವೆ.

ನಟಿ—ಆರ್ಯನೆ ಕ್ಷಮಿಸು, ಕ್ಷಮಿಸು, ತಿಳಿಯದೆ ಹಾಸ್ಯಮಾಡಿದೆನು.

ಸೂತ್ರಧಾರ—ಒಳ್ಳೆಯದು, ಹೊಸದಾಗಿ ಮಾಡಿಕೊಂಡಿರುವ ಈ ಸನ್ನಾಹವೇನು ? ಒಬ್ಬಳು ಗಂಧವನ್ನು ತೇಯುವಳು, ಮತ್ತೊಬ್ಬಳು ಹೂವನ್ನು ಕಟ್ಟುವಳು.

ನಟಿ—ಆರ್ಯನೆ, ಉಪವಾಸವ್ರತವನ್ನಾರಂಭಿಸಿರುವೆನು.

ಸೂತ್ರಧಾರ—ಅದು ಎಂತಹ ಉಪವಾಸ ?

ನಟಿ—ಸುಂದರನಾದ ಪತಿಯನ್ನು ಕೊಡತಕ್ಕ ಉಪವಾಸ.

ಸೂತ್ರಧಾರ—ಈ ಲೋಕದಲ್ಲೊ ? ಪರಲೋಕದಲ್ಲೊ ?

ನಟಿ—ಆರ್ಯನೆ, ಪರಲೋಕದಲ್ಲಿ.

ಸೂತ್ರಧಾರ—( ಸಭೆಯೊಡನೆ ) ಪೂಜ್ಯರೆ, ನೋಡಿ. ನಮ್ಮ ಮನೆಯನ್ನವನ್ನು ವ್ಯಯಮಾಡಿ ಪರಲೋಕದಲ್ಲಿ ಸುಂದರನಾದ ಪತಿಯನ್ನು ಹುಡುಕುವಳಂತೆ !

ನಟಿ—ಆರ್ಯನೆ, ನನ್ನಲ್ಲನುಗ್ರಹಿಸು. ಜನ್ಮಾಂತರದಲ್ಲಿಯೂ ನೀನೇ ಪತಿಯಾಗಬೇಕೆಂದು ನಾನು ಉಪವಾಸ ಮಾಡಿದೆನು.

ಸೂತ್ರಧಾರ—ಇದನ್ನು ನಿನಗಾರು ಉಪದೇಶಮಾಡಿದರು ?

ನಟಿ—ತಮಗೆ ಪ್ರಿಯಮಿತ್ರನಾದ ಚೂರ್ಣವೃದ್ಧನೇ ಉಪದೇಶ ಮಾಡಿದನು.

ಸೂತ್ರಧಾರ—(ಕೋಪದಿಂದ) ಆಃ ! ನೀಚನೆ ! ಚೂರ್ಣವೃದ್ಧನೆ ! ಧೊರೆಯಾದ ಪಾಲಕನು ಕುಪಿತನಾಗಿ ನಿನಗೆ ಹಿಂಗಟ್ಟು ಕಟ್ಟಿಸಿದುದನ್ನು ನಾನು ಯಾವಾಗ ನೋಡೇನು ?

ನಟಿ—ಆರ್ಯನೆ, ಕೋಪಮಾಡಬೇಡ. ನಿನಗೋಸ್ಕರವೇ ಈ ವ್ರತವನ್ನು ಉಪಕ್ರಮಿಸಿದುದು. (ಅಡ್ಡಬೀಳುವಳು).

ಸೂತ್ರಧಾರ—ಹಾಗಾದರೆ ಏಳು. ಈ ಉಪವಾಸವ್ರತವನ್ನು ಯಾರಿಂದ ಮಾಡಿಸಬೇಕು ? ಹೇಳು, ಹೇಳು.

ನಟಿ—ನಮಗೆ ತಕ್ಕ ಬ್ರಾಹ್ಮಣನಿಂದ ಮಾಡಿಸಬೇಕು.

ಸೂತ್ರಧಾರ—ಆದರೆ ನೀನು ಹೋಗು. ನಮಗೆ ತಕ್ಕ ಬ್ರಾಹ್ಮಣನನ್ನು ಕರೆದುಕೊಂಡು ಬರುವೆನು.

ನಟಿ—ಅಪ್ಪಣೆಯ ಪ್ರಕಾರ (ಎಂದು ಹೋಗುವಳು).

ಸೂತ್ರಧಾರ—ಈ ಉಜ್ಜಯಿನೀಪಟ್ಟಣದಲ್ಲಿ ಇರುವವರೆಲ್ಲರೂ ಶ್ರೀಮಂತರು. ನಮಗೆ ಯೋಗ್ಯನಾಗಿರುವ ಬ್ರಾಹ್ಮಣನನ್ನು ಎಲ್ಲಿ ಹುಡುಕಲಿ ? ಅಯ್ಯೋ, ಕಷ್ಟಕಷ್ಟ. (ನೋಡಿ) ಚಾರುದತ್ತನ ಮಿತ್ರನಾದ ಮೈತ್ರೇಯನು ಇತ್ತಕಡೆ ಬರುತ್ತಿರುವನು. (ಮುಂದೆ ಹೋಗಿ) ಅಯ್ಯಾ, ಮೈತ್ರೇಯನೆ, ಈ ಹೊತ್ತು ನಮ್ಮ ಮನೆಗೆ ಭೋಜನಕ್ಕೆ ಬರಬೇಕು.

ವಿದೂಷಕ—(ತೆರೆಯಲ್ಲಿ) ಅಯ್ಯಾ, ನನಗೇನೋ ವ್ಯಾಕುಲತೆಯುಂಟಾಗಿರುವುದು. ನಾನು ಬರುವುದಿಲ್ಲ. ನೀನು ಇನ್ನಾರಿಗಾದರೂ ಹೇಳಿಕೊ.

ಸೂತ್ರಧಾರ—ಅಯ್ಯಾ, ನಮ್ಮ ಮನೆಯಲ್ಲಿ ಒಳ್ಳೆಯ ಭೋಜನವಾಗುವುದು. ದಕ್ಷಿಣೆಯೂ ಏನಾದರೂ ಸಿಕ್ಕುವುದು.

ವಿದೂಷಕ—(ತೆರೆಯಲ್ಲಿ) ಮೊದಲೇ ನಾನು ಬರುವುದಿಲ್ಲವೆಂದು ಹೇಳಿದರೂ ಪದೇಪದೇ ನನಗೆ ಈ ನಿರ್ಬಂಧವೇನು ?

ಸೂತ್ರಧಾರ—ಇವನು ನನ್ನನ್ನು ಲಕ್ಷ್ಯಮಾಡಲಿಲ್ಲ. ಆಗಲಿ, ಮತ್ತೊಬ್ಬನನ್ನು ಕರೆಯುವೆನು (ಎಂದು ಹೋಗುವನು).

———

ಸೂತ್ರಧಾರ:- (ನಿರೂಪ್ಯ) ಆ: ಪಾಪ್ಯ: ಪುತ್ರ[illegible]ವದ್ಧ, ಕದಾನು ಖಲು ತ್ವಾಂ
ಕುಪಿತೇನ ರಾಜ್ಞಾ ನವವಧೂಕೇಶಹಸ್ತಮಿವ ಸುಗಂಧಂ
ಛೇದ್ಯಮಾನಂ ಪ್ರೇಕ್ಷಿಷ್ಯೇ। ('ವರ್ಧ್ಯಂತಂ' ಇತಿ ಪಾಠೇ ವರ್ಧ್ಯಮಾನಂ। ಪ್ರನೇಕ
ಸಂಪಾದಕೇ ಚಾರುದತ್ತಸ್ಯ ಹಸ್ತಗತಂ)

ನಟೀ- ಪ್ರಸೀದತ್ವಾರ್ಯ:। ಆರ್ಯಮಿಶ್ರಸ್ಯೈವ ಪಾರಲೌಕಿಕೇನಾಯಮುಪವಾಸ:। (ಇತಿ ಪಾದಯೋ: ಪತತಿ)

ಸೂತ್ರಧಾರ:- ಆರ್ಯೇ, ಉತ್ತಿಷ್ಠ। ಕಥಯಾತ್ರೋಪವಾಸೇ ಕೇನ ಕಾರ್ಯಂ।

ನಟೀ- ಅಸ್ಮಾದೃಶಜನಯೋಗ್ಯೇನ ಬ್ರಾಹ್ಮಣೇನೋಪನಿಮಂತ್ರಿತೇನ।

ಸೂತ್ರಧಾರ- ಅತ್ರ ಗಚ್ಛತ್ವಾರ್ಯಾ। ಅಹಮಪ್ಯಸ್ಮಾದೃಶಜನಯೋಗ್ಯಂ ಬ್ರಾಹ್ಮಣಮುಪ
ನಿಮಂತ್ರಯಾಮಿ।

ನಟೀ- ಯದಾರ್ಯ ಆಜ್ಞಾಪಯತಿ।

ಸೂತ್ರಧಾರ:- (ಪರಿಕ್ರಮ್ಯ) ಆಶ್ಚರ್ಯಂ। ತತ್ಕಥಂ ಮಯಾ ಏವಂ ಸಮೃದ್ಧಾಯಾಂ
ಉಜ್ಜಯಿನ್ಯಾಂ ಅಸ್ಮಾದೃಶಜನಯೋಗ್ಯೋ ಬ್ರಾಹ್ಮಣೋಽನ್ವೇಷಿತವ್ಯ:? ಏಷ
ಚಾರುದತ್ತಸ್ಯ ಮಿತ್ರಂ ಮೈತ್ರೇಯ ಇತ ಏವಾಗಚ್ಛತಿ। ಭವತು।
ಪ್ರಕ್ಷ್ಯಾಮಿ ತಾವತ್। ಆರ್ಯ ಮೈತ್ರೇಯ, ಅಸ್ಮತ್ಸಂಸ್ಪೃಷ್ಟೇ ಕ್ರತೌ
ಅಗ್ರಣೀರ್ಭವತ್ವಾರ್ಯ:। (ವಿಲೋಕ್ಯ)

(ನೇಪಥ್ಯೇ)

ಭೋ:, ಅನ್ಯಂ ಬ್ರಾಹ್ಮಣಂ ಉಪನಿಮಂತ್ರಯತು ಭವಾನ್। ವ್ಯಾಪೃತ
ಇದಾನೀಮಹಂ। (ವ್ಯಾಪೃತ:=ಕಾರ್ಯಾಂತರವ್ಯಾಸಕ್ತ:)

ಸೂತ್ರಧಾರ:- ಆರ್ಯ, ಸಂಪನ್ನಂ ಭೋಜನಂ ನಿ:ಸಪತ್ನಂ ಚ। ಅಪಿ ಚ ದಕ್ಷಿಣಾಪಿ
ತೇ ಭವಿಷ್ಯತಿ। (ಸಂಪನ್ನಂ ಪುಷ್ಟಂ। ನಿಸ್ಸಪತ್ನಂ (ನಿಸ್ಸಪತ್ರಂ) ಚ।
ಪಿತ್ರ್ಯಾಣಾಂ ಸಮುತ್ಸೃಷ್ಟಂ ಪೃಥಗ್ವಿಸರ್ಜಿತ ಕಂಟಕಾಲಂಕಾರಪಾತ್ರಂ। ನಿ:ಸ್ಸಪ
ಇತಿ ಯಸ್ಯ ಪ್ರಸಿದ್ಧಿ:। "ನಿರ್ಗತಸಪತ್ರಂ ನಿ:ಸಪತ್ನಂ। ವಿಪಕ್ಷಸ್ಯಾಪರಸ್ಯ
ಅಭಾವಾತ್" ಇತಿ ಕೇಚಿತ್।)

(ಪುನರ್ನೇಪಥ್ಯೇ)

ಭೋ:, ಇದಾನೀಂ ಪ್ರಥಮಮೇವ ಪ್ರತ್ಯಾಖ್ಯಾತೋಽಸಿ। ತತ್ ಕಿಂ ಇದಾನೀಂ
ತೇ ನಿರ್ಬಂಧ: ಪದೇ ಪದೇ ಮಾಂ ಅನುಬಂಧಯಿತುಂ।

ಸೂತ್ರಧಾರ:- ಪ್ರತ್ಯಾಖ್ಯಾತೋಽಸ್ಮ್ಯನೇನ। ಭವತು। ಅನ್ಯಂ
ಬ್ರಾಹ್ಮಣಮುಪನಿಮಂತ್ರಯಾಮಿ। (ಇತಿ ನಿಷ್ಕ್ರಾಂತ:)

ಪ್ರಸ್ತಾವನೇತ್ಯಾಮುಖ ಸಂಧಿ ಪರ್ಯಾಯಾಃ। ಯದುಕ್ತಂ—

"ಸೂತ್ರಧಾರೇಣ ಸಹಿತಾಃ ಸಂಲಾಪಂ ಯತ್ರ ಕುರ್ವತೇ
ನಟೀ ವಿದೂಷಕೋ ವಾಪಿ ಪಾರಿಪಾರ್ಶ್ವಿಕ ಏವ ವಾ॥
ಆಮುಖಂ ನಾಮ ತಜ್ಜ್ಞೇಯಂ ಸೈವ ಪ್ರಸ್ತಾವನಾ ಮತಾ"॥

(ಪ್ರವಿಶ್ಯ ಪ್ರಾಕಾರಬದ್ಧಃ)

(ಪ್ರಾಕಾರಃ ಪ್ರವಿಷ್ಟದಿಶಃ)

ಮೈತ್ರೇಯಃ:- ('ಅನ್ಯಂ ಪ್ರಾಕಾರಂ' ಇತಿ ಪ್ರವೇಶಕಂ ಪರಿಕ್ರಮ್ಯ) ಅಥವಾ ಮಯಾಪಿ ಮೈತ್ರೇಯೇಣ ಪರಕೀಯಾಮಂತ್ರಣಕಾನಿ ಸಮೀಹಿತವ್ಯಾನಿ। ಹಾ ಅವಸ್ಥೇ, ತುಲಯಸಿ। ಯೋ ನಾಮಾಹಂ ತತ್ರಭವತಶ್ಚಾರುದತ್ತಸ್ಯ ಋದ್ಧ್ಯಾ ಅಹೋರಾತ್ರಂ ಪ್ರಯತ್ನಸಿದ್ಧೈರುದ್ಗಾರಸುರಭಿಗಂಧಿಭಿರ್ಮೋದಕೈರೇವಾಶಿತೋಽಭ್ಯಂತರ ಚತುಃಶಾಲಕದ್ವಾರ ಉಪವಿಷ್ಟೋ ಮಲ್ಲಕಶತಪರಿವೃತಶ್ಚಿತ್ರಕರ ಇವಾಂಗುಲೀಭಿಃ ಸ್ಪೃಷ್ಟ್ವಾ ಸ್ಪೃಷ್ಟ್ವಾಪನಯಾಮಿ। ನಗರಚತ್ವರವೃಷಭ ಇವ ರೋಮಂಥಾಯಮಾನಸ್ತಿಷ್ಠಾಮಿ। ಸ ಇದಾನೀಮಹಂ ತಸ್ಯ ದರಿದ್ರತಯಾ ಯತ್ರ ತತ್ರ ಚರಿತ್ವಾ ಗೃಹಪಾರಾವತ ಇವಾವಾಸನಿಮಿತ್ತಮತ್ರಾಗಚ್ಛಾಮಿ। ಏಷ ಆರ್ಯಚಾರುದತ್ತಸ್ಯ ಪ್ರಿಯವಯಸ್ಯೇನ ಜೂರ್ಣವೃದ್ಧೇನ ಜಾತೀಕುಸುಮವಾಸಿತಃ ಪ್ರಾವಾರಕೋಽನುಪ್ರೇಷಿತಃ ಸಿದ್ಧೀಕೃತದೇವಕಾರ್ಯಸ್ಯಾರ್ಯಚಾರುದತ್ತಸ್ಯೋಪನೇತವ್ಯ ಇತಿ। ತದ್ಯಾವದಾರ್ಯಚಾರುದತ್ತಂ ಪಶ್ಯಾಮಿ। ಏಷ ಚಾರುದತ್ತಃ ಸಿದ್ಧೀಕೃತದೇವಕಾರ್ಯೋ ಗೃಹದೇವತಾನಾಂ ಬಲಿಂ ಹರನ್ನಿತ ಏವಾಗಚ್ಛತಿ। (ಮಲ್ಲಕಃ: ಪಾತ್ರವಿಶೇಷಃ ಪತ್ರಪುಟೋ ವಾ। 'ದೋನಾ' ಇತಿ ಪ್ರಸಿದ್ಧೋ ವಿದೂಷಕಪಕ್ಷೇ। ಚಿತ್ರಕರಪಕ್ಷೇ ವರ್ಣಿಕಾಪಾತ್ರಂ ಮಲ್ಲಕಃ॥ ಅಪನಯಾಮಿ ಭಕ್ಷಯಾಮಿ। ಅತ್ಯಂತಂ ತೃಪ್ತತ್ವಾದಿತ್ಯರ್ಥಃ। ಚಿತ್ರಕರೋಽಪ್ಯಂಗುಲೀಸಂಸ್ಥಿತ ಲೇಖನಿಕಯಾ ವರ್ಣಿಕಾಖಂಡಂ ಸ್ಪೃಷ್ಟ್ವಾ ಸ್ಪೃಷ್ಟ್ವಾಪನಯತಿ ಚಿತ್ರಯತಿ। ಅನ್ಯಥಾ ವರ್ಣಿಕಾಬಿಂದುಪಾತಃ ಸ್ಯಾದಿತಿ॥ "ಅಥವಾ ನಗರಚತ್ವರವೃಷಭ ಇವ" ಇತಿ ಪಾಠಾಂತರಂ ವ್ಯಾಖ್ಯಾ॥ ಬಲಿಂ ಪ್ರಿಯಂ॥)

(ತತಃ ಪ್ರವಿಶತಿ ಯಥಾನಿರ್ದಿಷ್ಟಶ್ಚಾರುದತ್ತೋ ರದನಿಕಾ ಚ।)

ಚಾರುದತ್ತಃ:- (ಊರ್ಧ್ವಮವಲೋಕ್ಯ ಸನಿರ್ವೇದಂ ನಿಃಶ್ವಸ್ಯ।)

[illegible]

ಯಾಸಾಂ ಬಲಿಃ ಸಪದಿ ಮದ್ಗೃಹದೇಹಲೀನಾಂ
ಹಂಸೈಶ್ಚ ಸಾರಸಗಣೈಶ್ಚ ವಿಲುಪ್ತಪೂರ್ವಃ।
ತಾಸ್ವೇವ ಸಂಪ್ರತಿ ವಿರೂಢತೃಣಾಂಕುರಾಸು
ಬೀಜಾಂಜಲಿಃ ಪತತಿ ಕೀಟಮುಖಾವಲೀಢಃ॥ (ಅವಲೀಢಃ = ಆಸ್ವಾದಿತಃ)

(ಇತಿ ಮಂದಂ ಮಂದಂ ಪರಿಕ್ರಮ್ಯೋಪವಿಶತಿ)

# ಮೊದಲನೆಯಂಕಂ

ವಿದೂಷಕ—(ಪ್ರವೇಶಿಸಿ, ಬಹಿರ್ವಾಸವನ್ನು ಕೈಯಲ್ಲಿ ಹಿಡಿದುಕೊಂಡು) ನಾನು ಬರುವುದಿಲ್ಲ. ಮತ್ತೊಬ್ಬನನ್ನು ಕರೆ. (ಮುಂದೆ ನೋಡಿ) ಅಯ್ಯೋ ! ನಾನೇಕೆ ಬರುವುದಿಲ್ಲವೆಂದು ಹೇಳಿದೆ ? ಈಗ ಯಾರಾದರೂ ಭೋಜನಕ್ಕೆ ಕರೆದರೆತಾನೇ ಆ ಅನ್ನದಿಂದ ನಾನು ಜೀವಿಸಬೇಕಾಗಿದೆ. ಹಾ ! ದುರ್ದೆಸೆಯೇ ! ನನಗೆ ಇಂತಹ ಕಷ್ಟವನ್ನು ಕೊಟ್ಟೆಯಾ ? ಪೂರ್ವದಲ್ಲಿ ನಮ್ಮ ಚಾರುದತ್ತನ ಉಚ್ಛ್ರಾಯಕಾಲದಲ್ಲಿ ಘಮಘಮಿಸುವ ತುಪ್ಪದ ಕಡುಬುಗಳನ್ನೇ ತಿಂದು ತಿಂದು, ಬೀದಿಯಲ್ಲಿ ಅಡ್ಡಾಡಿ, ದೊಡ್ಡ ಗೂಳಿಯಂತೆ ಒಳತೊಟ್ಟಿಯಲ್ಲಿ ಮೆಲುಕುಮಾಡುತ್ತಿದ್ದೆನು. ಈಗ ಆ ಚಾರುದತ್ತನಿಗೆ ಬಡತನ ಬಂದಿರುವುದರಿಂದ ಅಲ್ಲೂ ಇಲ್ಲೂ ಸುತ್ತಿ ಹೊಟ್ಟೆಯನ್ನು ಹೊರೆದುಕೊಂಡು, ಪಾರಿವಾಳದ ಹಕ್ಕಿಯಂತೆ ವಾಸಮಾಡುವುದಕ್ಕೆ ಮಾತ್ರ ಇಲ್ಲಿಗೆ ಬರುವೆನು. ದೇವಕಾರ್ಯವನ್ನು ನೆರವೇರಿಸಿದನಂತರ ಆ ಚಾರುದತ್ತನಿಗೆ ಕೊಡೆಂದು ಆತನ ಮಿತ್ರನಾದ ಚೂರ್ಣವೃದ್ಧನು ಜಾಜಿಯ ಹೂವುಗಳಿಂದ ವಾಸನೆ ಕಟ್ಟಿರುವ ಈ ಬಹಿರ್ವಾಸವನ್ನು ನನ್ನ ಕೈಗೆ ಕೊಟ್ಟಿರುವನು. ಆದುದರಿಂದ ಆರ್ಯಚಾರುದತ್ತನನ್ನು ನೋಡುವೆನು. (ಮುಂದೆ ನೋಡಿ) ಇದೊ, ಆರ್ಯ ಚಾರುದತ್ತನು ! ದೇವತಾಕಾರ್ಯವನ್ನು ನೆರವೇರಿಸಿಕೊಂಡು ಗೃಹದೇವತೆಗಳಿಗೆ ಬಲಿಯನ್ನು ಕೊಡುತ್ತಾ ಇತ್ತಕಡೆಯೆ ಬರುತ್ತಿರುವನು (ಎಂದು ಹೋಗುವನು).

(ಸ್ಥಾನ—ಚಾರುದತ್ತನ ಮನೆ.)

ಚಾರುದತ್ತ—(ರದನಿಕೆಯೊಡನೆ ಪ್ರವೇಶಿಸಿ)

ಮುನ್ನೆಲ್ಲಿರ್ದುಪ್ಪೊ ನೀಳ್ದ ಭೂತಬಲಿಯಂ ಮೆಲ್ಲುತ್ತೆ ಹಂಸಾಳಿ ತಾ ।
ಮೆನ್ನೀಮಂದಿರದೇಹಳೀತಳದೆ ಮೂಡಿರ್ಕುಂ ತೃಣಸ್ತೋಮಮಿಂ ॥
ದಿನ್ನೇಂ ಕೀಟಸಮೂಹಮುಂಡು ಕಳೆದೀ ಪುಲ್ಲಕ್ಕಿಯಂ ನೋಡೆ ಹಾ ।
ಖಿನ್ನಂ ಮನ್ಮನಮಪ್ಪುದೆಂತು ಸಹಿಪೆಂ ನಿರ್ಭಾಗ್ಯನಾಂ ಹಾ ವಿಧೀ ॥

ವಿದೂಷಕ—(ಸಮೀಪಕ್ಕೆ ಬಂದು) ಆರ್ಯ ಚಾರುದತ್ತನೆ, ನಿನಗೆ ಕ್ಷೇಮವುಂಟಾಗಲಿ.

ಚಾರುದತ್ತ—ಆಪ್ತಮಿತ್ರನೆ, ನಿನಗೆ ಕ್ಷೇಮವೆ? ಬಾ, ಕುಳಿತುಕೊ.

ವಿದೂಷಕ—ಅಪ್ಪಣೆ. (ಕುಳಿತುಕೊಂಡು) ಅಯ್ಯಾ, ಮಿತ್ರನೆ, ನಿನ್ನ ಸ್ನೇಹಿತನಾದ ಚೂರ್ಣವೃದ್ಧನು ಜಾಜಿಯಹೂವಿನಿಂದ ವಾಸನೆಕಟ್ಟಿರುವ ಈ ಬಹಿರ್ವಾಸವನ್ನು ನಿನಗೆ ಒಪ್ಪಿಸುವಂತೆ ಹೇಳಿ ಕೊಟ್ಟಿರುವನು, ಇದೊ. (ಕೊಡುವನು.)

ಚಾರುದತ್ತ—(ತೆಗೆದುಕೊಂಡು, ಮೇಲೆನೋಡಿ ಚಿಂತೆಯಿಂದ ನಿಟ್ಟುಸಿರು ಬಿಡುತ್ತ)

ರಾಗ ‖ ತೋಡಿ ‖ ತಾಳ ‖

ವಿಧಿಯೇನಗೈವೆನಾ । ನೀಗ ‖ ಪ ‖
ವಿಧವಿಧದಿಂದಲೆನ್ನಗಾಸಿಸೆ ‖ ಅ ‖
ಅತಿದಾತೃವೆ । ನ್ನುತಯೋಚಿಸಿ । ಅತಿಥಿಗಳೆನ್ನನು
ಯಾಚಿಸೇ । ಗತಿಯಿಲ್ಲವೆಂದದೆಂತುಪೇಳ್ವೆನೊ ‖ ೧ ‖
ಧನಹೀನನೀ । ತನೆಂ ಪ್ರಿಯೋ । ಜನವೆನ್ನುತೆನ್ನಬಾಂಧವ ।
ಜನವೆಲ್ಲುಪೇಕ್ಷೆಗೈವೊಲಾದುದೆ ‖ ೨ ‖
ಸಿರಿ ಇಲ್ಲದೇ ಪರಿತಾಪದಿಂ । ದಿರುತಿರ್ಪನಿನ್ನುಧರ್ಮವು ।
ದೊರೆಯುವರೀತಿಯೆಂತೊಕಾಣೆನು ‖ ೩ ‖

ವಿದೂಷಕ—ಅಯ್ಯಾ, ಇದೇನು ಯೋಚನೆಯನ್ನು ಮಾಡುವೆ?

ಚಾರುದತ್ತ—ಮಿತ್ರನೆ, ಕತ್ತಲೆಯಲ್ಲಿದ್ದು ದೀಪದ ಬೆಳಕಿಗೆ ಬಂದಂತೆ ದುಃಖದಲ್ಲಿದ್ದು ಸುಖಪಡಬಹುದು. ಲೋಕದಲ್ಲಿ ಯಾವ ಮನುಷ್ಯನು ಸುಖಪಟ್ಟ ಬಳಿಕ ದುಃಖಕ್ಕೆ ಗುರಿಯಾಗುವನೋ, ಅವನು ಬದುಕಿದ್ದರೂ ಸತ್ತವನಂತೆಯೇ ಸರಿ.

ವಿದೂಷಕ—ಅಯ್ಯಾ, ಚಾರುದತ್ತನೆ, ದಾರಿದ್ರ್ಯ ಒಳ್ಳೆಯದೋ? ಮರಣ ಒಳ್ಳೆಯದೊ?

ಚಾರುದತ್ತ—

ಕಂದ ‖ ದಾರಿದ್ರ್ಯಮುಮಂ ಮರಣಮು ।
ನಾರಯಲಾಮರಣವಲ್ಪದುಃಖದಮಿಳೆಯೊಳ್ ‖

ವಿದೂಷಕ:- ಏಷ ಆರ್ಯಚಾರುದತ್ತ:। ತದ್ಯಾವದುಪಸರ್ಪಾಮಿ।
(ಉಪಸೃತ್ಯ) ಸ್ವಸ್ತಿ ಭವತೇ। ವರ್ಧತಾಂ ಭವಾನ್।

ಚಾರುದತ್ತ:- ಅಯೆ ಸರ್ವಕಾಲಮಿತ್ರಂ ಮೈತ್ರೇಯ: ಪ್ರಾಪ್ತ:। ಸಖೇ ಸ್ವಾಗತಂ। ಆಸ್ಯತಾಂ।

ವಿದೂಷಕ:- ಯದ್ಭವಾನಾಜ್ಞಾಪಯತಿ। (ಉಪವಿಶ್ಯ) ಭೋ ವಯಸ್ಯ, ಏಷ ಪ್ರಿಯವಯಸ್ಯೇನ ಚೂರ್ಣವೃದ್ಧೇನ ಜಾತೀಕುಸುಮವಾಸಿತ: ಪ್ರಾವಾರಕೋಽನುಪ್ರೇಷಿತ: ಸಿದ್ಧೀಕೃತದೇವಕಾರ್ಯಸ್ಯಾರ್ಯಚಾರುದತ್ತಸ್ಯ ತ್ವಯೋಪನೇತವ್ಯ ಇತಿ। (ಸಮರ್ಪಯತಿ)

(ಚಾರುದತ್ತೋ ಗೃಹೀತ್ವಾ ಸಚಿಂತ: ಸ್ಥಿತ:)

ವಿದೂಷಕ:- ಭೋ: ಕಿಮಿದಂ ಚಿಂತ್ಯತೇ।

ಚಾರುದತ್ತ:- ವಯಸ್ಯ;

ಸುಖಂ ಹಿ ದು:ಖಾನ್ಯನುಭೂಯ ಶೋಭತೇ ಘನಾಂಧಕಾರೇಷ್ವಿವ ದೀಪದರ್ಶನಂ।
ಸುಖಾತ್ತು ಯೋ ಯಾತಿ ನರೋ ದರಿದ್ರತಾಂ ಧೃತ: ಶರೀರೇಣ ಮೃತ: ಸ ಜೀವತಿ

(ಜಯಾಭಿನ್ನ್ಯ ವಶಿಕ್ಯವೃತ್ತ:)

ವಿದೂಷಕ:- ಭೋ ವಯಸ್ಯ, ಮರಣಾದ್ದಾರಿದ್ರ್ಯಾದ್ವಾ ಕತರತ್ತೇ ರೋಚ

ಚಾರುದತ್ತ:- ವಯಸ್ಯ,

ದಾರಿದ್ರ್ಯಾನ್ಮರಣಾದ್ವಾ ಮರಣಂ ಮಮ ರೋಚತೇ ನ ದಾರಿದ್ರ್ಯಂ।
ಅಲ್ಪಕ್ಲೇಶಂ ಮರಣಂ ದಾರಿದ್ರ್ಯಮನಂತಕಂ ದು:ಖಂ॥

ವಿದೂಷಕಃ:- ಭೋ ವಯಸ್ಯ, ಅಲಂ ಸಂತಪ್ತೇನ। ಪ್ರಣಯಿಜನ
ಸಂಕ್ರಾಮಿತವಿಭವಸ್ಯ ಸುರಜನಪೀತಶೇಷಸ್ಯ ಪ್ರತಿಪಚ್ಚಂದ್ರಸ್ಯೇವ
ಪರಿಕ್ಷಯೋಽಪಿ ತೇಽಧಿಕತರಂ ರಮಣೀಯಃ। (ಯದಿ ಅರ್ಥ
ವ್ಯಯೇನಾರ್ಥಾಃ ಸ್ವದೋಷೇಣ ನಾಶ್ಯಂತೇ ತದಾ ಸಂತಾಪಃ ಕ್ರಿಯ:
ತವ ತು ನ ತಥೇತಿ ಭಾವಃ॥ ಪ್ರಣಯೀಜನಃ ಸ್ನಿಗ್ಧಬಂಧವೋಽ
ರ್ಥೀ ಚ॥)

ಚಾರುದತ್ತಃ:- ವಯಸ್ಯ ನ ಮಮಾರ್ಥಾನ್ ಪ್ರತಿ ದೈನ್ಯಂ। ಪಶ್ಯ।

ಏತತ್ತು ಮಾಂ ದಹತಿ ಯದ್ಗೃಹಮಸ್ಮದೀಯಂ
ಕ್ಷೀಣಾರ್ಥಮಿತ್ಯತಿಥಯಃ ಪರಿವರ್ಜಯಂತಿ।
ಸಂಶುಷ್ಕಸಾಂದ್ರಮದಲೇಖಮಿವ ಭ್ರಮಂತಃ
ಕಾಲಾತ್ಯಯೇ ಮಧುಕರಾಃ ಕರಿಣಃ ಕಪೋಲಂ॥

ಕಾಲಾತ್ಯಯ = ಮದಸಮಯಾಪಗಮೇ
ಧನಲಾಭಸಮಯಾಪಗಮೇ ಚ।

ವಿದೂಷಕಃ:- ಭೋ ವಯಸ್ಯ, ಏತೇ ಖಲು ದಾಸ್ಯಾಃ ಪುತ್ರಾ ಅರ್ಥಕಲ್ಯವರ್ತಾ
ವರಟಾಭೀತಾ ಇವ ಗೋಪಾಲದಾರಕಾ ಅರಣ್ಯೇ ಯತ್ರ ಯತ್ರ ನ
ಖಾದ್ಯಂತೇ ತತ್ರ ತತ್ರ ಗಚ್ಛಂತಿ। (ದಾಸೀಪುತ್ರಾಃ ಅರ್ಥಕಾಮಪ್ರವಣಾಃ
ವರಟಾ "ಪೀರಣೀ" ಇತಿ ಖ್ಯಾತಾ। ತತಸ್ತ್ರಸ್ತಾಃ। ಅರಣ್ಯೇ ಗೋಪಾಲಪುತ್ರಾ
ಉಪಭುಜ್ಯಂತೇ ತತ್ರ ತತ್ರ ಯಾಂತಿ।)
ಇವ ಯತ್ರ ಯತ್ರ ನ ಖಾದ್ಯಂತೇ
(ವರಟ = ಒಂದು ವಿಧವಾದ ಕಡಜ).

ಚಾರುದತ್ತಃ:- ವಯಸ್ಯ,

ಸತ್ಯಂ ನ ಮೇ ವಿಭವನಾಶಕೃತಾಸ್ತಿ ಚಿಂತಾ ಭಾಗ್ಯಕ್ರಮೇಣ ಹಿ ಧನಾನಿ ಭವಂತಿ ಯಾಂತಿ।
ಏತತ್ತು ಮಾಂ ದಹತಿ ನಷ್ಟಧನಾಶ್ರಯಸ್ಯ ಯತ್ ಸೌಹೃದಾದಪಿ ಜನಾಃ ಶಿಥಿಲೀಭವಂತಿ॥

ಅಪಿ ಚ।

ದಾರಿದ್ರ್ಯಾತ್ ಹ್ರಿಯಮೇತಿ ಹ್ರೀಪರಿಗತಃ ಪ್ರಭ್ರಶ್ಯತೇ ತೇಜಸೋ ನಿಸ್ತೇಜಾಃ ಪರಿಭೂಯತೇ ಪರಿಭವಾನ್ನಿರ್ವೇದ
ಮಾಪದ್ಯತೇ। ನಿರ್ವಿಣ್ಣಃ ಶುಚಮೇತಿ ಶೋಕಪಿಹಿತೋ ಬುದ್ಧ್ಯಾ ಪರಿತ್ಯಜ್ಯತೇ
ನಿರ್ಬುದ್ಧಿಃ ಕ್ಷಯಮೇತ್ಯಹೋ ನಿಧನತಾ ಸರ್ವಾಪದಾಮಾಸ್ಪದಂ॥ 14॥

ವಿದೂಷಕಃ:- ಭೋ ವಯಸ್ಯ, ತಮೇವಾರ್ಥಕಲ್ಯವರ್ತಂ ಸ್ಮೃತ್ವಾಲಂ ಸಂತಾಪಿತೇನ।
(ಕಲ್ಯವರ್ತಂ ಪ್ರಾತರಾಶಃ। ಏತದುಪಲಕ್ಷ್ಯೇ ಚಾರ್ಥಸ್ಯ ತಾವದ್ಯಾವದ್ರವ್ಯಸ್ಯ
ಜನಾಂತರಾನವಗಾಹಿತತ್ವಾತ್ ತದ್ಗ್ರಾಹಿತ್ವೇ ಧನಸ್ಯ ಚ ತ್ರಾಃ ಸಾಧ್ಯತೇ
ಭವಂತೀತ್ಯಾಶಯಃ)

ಚಾರುದತ್ತಃ:- ವಯಸ್ಯ ದಾರಿದ್ರ್ಯಂ ಹಿ ಪುರುಷಸ್ಯ
(ಚಿಂತಾಂ ನಿನಾಟಯತಿ)

ದಾರಿದ್ರ್ಯಂ ಚಿರದುಃಖದ ।
ಮಾರುಮನೆಡೆವಿಡದು ಸುಡುಗುಮಾಮರಣಾಂತಂ ॥

ವಿದೂಷಕ—ಅಯ್ಯಾ, ಮಿತ್ರನೆ, ಏಕೆ ಸಂತಾಪಪಡುವೆ? ಸುಮ್ಮ ನಿರು.

ಕಂದ ॥ ಸುರಕುಲಮಂ ನಿಜಕಲೆಗಳಿ ।
ನುರೆಪೋದಂಗೊಳಿಸಿ ಕಾರ್ಶ್ಯಮಾಂತಾಶಶಿವೊಲ್ ॥
ಸಿರಿಯೆಲ್ಲಮನೆರೆವರ್ಗಿ ।
ಗಿತ್ತರರೇ! ಬಡತನಮನಾಂತುವೆುಸೆವೈ ಕೆಳೆಯಾ ॥

ಚಾರುದತ್ತ—ಮಿತ್ರನೇ, ದ್ರವ್ಯಹೋಯಿತೆಂದು ನಾನು ವ್ಯಸನ ಪಡುವುದಿಲ್ಲ. ಮದೋದಕವಿಲ್ಲದ ಆನೆಯ ಗಂಡಸ್ಥಲವನ್ನು ಭ್ರಮರ ಗಳು ಅನಾದರಿಸುವಂತೆ ನನ್ನನ್ನು ದರಿದ್ರನೆಂದು ತಿಳಿದು ಅತಿಥಿಗಳು ಬಾರದೆಹೋದಾರಲ್ಲಾ ಎನ್ನುವ ದುಃಖವೊಂದೇ ನನ್ನನ್ನು ಬಾಧಿ ಸುವುದು.

ವಿದೂಷಕ—ಮಿತ್ರನೇ, ಕ್ಷಣಿಕವಾದ ಈ ಕೆಟ್ಟದ್ರವ್ಯವು ಎಲ್ಲಿ ವ್ಯಯ ವಿಲ್ಲವೋ ಅಲ್ಲಿಯೇ ಹೋಗಿ ಸೇರುವುದು.

ಚಾರುದತ್ತ—ನಿಜ. ಆದರೆ—

ಕಂದ ॥ ಸಿರಿಪೋದುದೆಂದು ಮನದೊಳ್ ।
ಕೊರಗನದೈತರ್ಪುವಂತದೃಷ್ಟದವಶದಿಂ ॥
ತೆರಳ್ವುದತಿಥಿಗಳೆನ್ನಂ ।
ದರಿದ್ರನೆಂದರಿದು ತೊರೆವರೆಂಬುದೆ ದುಃಖಂ ॥

ಗೃಹದೇವತೆಗಳಿಗೆ ಪೂಜೆಮಾಡಿದುದಾಯಿತು. ನೀನು ಹೋಗಿ ರಾಜಮಾರ್ಗದಲ್ಲಿರುವ ದೇವತೆಗಳಿಗೆ ಪೂಜೆಮಾಡಿ ಬಾ.

ವಿದೂಷಕ—ನಾನು ಹೋಗುವುದಿಲ್ಲ.

ಚಾರುದತ್ತ—ಏಕೆ?

ವಿದೂಷಕ—ಎಷ್ಟು ಪೂಜೆಮಾಡಿದರೂ ನಿನಗೆ ಯಾವ ದೇವ ತೆಯೂ ಅನುಗ್ರಹಮಾಡಲಿಲ್ಲ. ಆದುದರಿಂದ ದೇವರನ್ನು ಪೂಜೆಮಾಡಿ ಪ್ರಯೋಜನವೇನು?

ಚಾರುದತ್ತ—ಮಿತ್ರನೆ, ಹಾಗೆ ಹೇಳಬೇಡ. ಗೃಹಸ್ಥನಿಗೆ ಇದು ನಿತ್ಯಕರ್ಮವು. ಮನೋವಾಕ್ಕಾಯಗಳಿಂದ ನಾವು ಮಾಡಿದ ಪೂಜೆಗೆ ದೇವತೆಗಳು ಸಂತುಷ್ಟರಾಗುವರು. ಬರಿಯ ವಿಚಾರದಿಂದೇನು ಪ್ರಯೋಜನ. ನೀನು ಹೋಗಿ ಪೂಜೆಯನ್ನು ನೆರವೇರಿಸಿಕೊಂಡು ಬಾ.

ವಿದೂಷಕ—ಅಯ್ಯಾ, ನಾನು ಹೋಗುವುದಿಲ್ಲ. ಇನ್ನಾರಿಗಾದರೂ ಆಜ್ಞಾಪಿಸು. ಕನ್ನಡಿಯಲ್ಲಿ ಎಡಗಡೆಯದು ಬಲಗಡೆಗೂ, ಬಲಗಡೆಯದು ಎಡಗಡೆಗೂ ಕಾಣುವಂತೆ ಬ್ರಾಹ್ಮಣನಾದ ನನಗೆ ಎಲ್ಲವೂ ವಿಪರೀತವಾಗಿಯೇ ತೋರುವುದು. ಮತ್ತು ಈ ಸಾಯಂಕಾಲದಲ್ಲಿ ಸೂಳೆಯರೂ, ವಿಟರೂ, ಚೇಟರೂ, ರಾಜವಲ್ಲಭರಾದ ಪುರುಷರೂ ರಾಜಮಾರ್ಗದಲ್ಲಿ ಸಂಚರಿಸುವರು. ಈಗ ನಾನು ಅವರಿದಿರಾಗಿ ಹೋದರೆ ಕಪ್ಪೆಯನ್ನು ಹುಡುಕುತ್ತಿರುವ ಕಾಲಸರ್ಪಕ್ಕೆ ಇಲಿ ಸಿಕ್ಕಿದಂತಾಗುವುದು.

ಚಾರುದತ್ತ—ಇರಲಿ, ನೀನು ಇಲ್ಲಿಯೇ ಇರು. ನಾನು ಆಹ್ನಿಕವನ್ನು ನೆರವೇರಿಸುವೆನು. (ಹೋಗುವರು.)

(ಸ್ಥಾನ—ಬೀದಿ.)

ಶಕಾರ—(ತೆರೆಯಲ್ಲಿ) ನಿಲ್ಲು. ವಸಂತಸೇನೆಯೇ, ನಿಲ್ಲು.

(ವಸಂತಸೇನೆ, ವಿಟ, ಶಕಾರ, ಚೇಟರ ಪ್ರವೇಶ.)

ವಿಟ––ಎಲೆ ವಸಂತಸೇನೇ, ಜಾಗ್ರತೆಯಾಗಿ ಓಡುತ್ತಾ ಸುಕುಮಾರಗಳಾದ ನಿನ್ನ ಈ ಚರಣಗಳನ್ನು ಏಕೆ ಬಳಲಿಸುವೆ? ಬೆನ್ನಟ್ಟಿ ಬರುವ ಬೇಡನನ್ನು ಕಂಡು ಭಯಪಟ್ಟ ಹೆಣ್ಣುಜಿಂಕೆಯಂತೆ ಭಯಚಂಚಲದೃಷ್ಟಿಯಿಂದ ನೋಡುತ್ತಾ ಏಕೆ ಓಡುವೆ? ನಿಲ್ಲು ನಿಲ್ಲು.

ವಿಟ—ಎಲೆ ಹುಡುಗಿ, ವಸಂತಸೇನೆ, ನಿಲ್ಲು ನಿಲ್ಲು. ಏಕೆ ಓಡುವೆ? ಏಕೆ ಜಾಗ್ರತೆಯಾಗಿ ಪಲಾಯನಮಾಡುವೆ? ನೀನೇನೂ ಸಾಯುವುದಿಲ್ಲ. ಬೆಂಕಿಯು ಮಾಂಸವನ್ನು ಸುಡುವಂತೆ ಕಾಮಾಗ್ನಿಯು ನನ್ನನ್ನು ದಹಿಸುತ್ತಿರುವುದು, ನಿಲ್ಲು ನಿಲ್ಲು.

ಚೇಟ—ಆರ್ಯಳೆ, ನಿಲ್ಲುನಿಲ್ಲು. ಗ್ರೀಷ್ಮಕಾಲದಲ್ಲಿ ಭಯಪಟ್ಟ ನವಿಲಿನಂತೆ ನೀನು ಓಡುವೆ. ಸ್ವಾಮಿಯಾದ ಶಕಾರನು ಕಾಡಿನಲ್ಲಿ ಹೋಗುವ ನಾಯ ಮರಿಯಂತೆ ನಿನ್ನನ್ನೇ ಅನುಸರಿಸುತ್ತಿರುವನು.

ಚಾರುದತ್ತಃ:— ವಯಸ್ಯ ಮಾ ಮೈವಂ। ಗೃಹಸ್ಥಸ್ಯ ನಿತ್ಯೋಯಂ ವಿಧಿಃ।

ತಪಸಾ ಮನಸಾ ವಾಗ್ಭಿಃ ಪೂಜಿತಾ ಬಲಿಕರ್ಮಭಿಃ ।
ತುಷ್ಯಂತಿ ಶಮಿನಾಂ ನಿತ್ಯಂ ದೇವತಾಃ ಕಿಂ ವಿಚಾರಿತೈಃ ॥

ತದ್ಗಚ್ಛ ಮಾತೃಭ್ಯೋ ಬಲಿಮುಪಹರ।

ವಿದೂಷಕಃ:— ಭೋಃ, ನ ಗಮಿಷ್ಯಾಮಿ। ಅನ್ಯಃ ಕೋಽಪಿ ಪ್ರಯುಜ್ಯತಾಂ। ಮಮ ಪುನರ್ಬ್ರಾಹ್ಮಣಸ್ಯ ಸರ್ವಮೇವ ವಿಪರೀತಂ ಪರಿಣಮತಿ। ಆದರ್ಶಗತೇವ ಛಾಯಾ ವಾಮತೋ ದಕ್ಷಿಣಾ, ದಕ್ಷಿಣತೋ ವಾಮಾ। ಅನ್ಯಚ್ಚೈತಸ್ಯಾಂ ಪ್ರದೋಷವೇಲಾಯಾಮಿಹ ರಾಜಮಾರ್ಗೇ ಗಣಿಕಾ ವಿಟಾಶ್ಚೇಟಾ ರಾಜವಲ್ಲಭಾಶ್ಚ ಪುರುಷಾಃ ಸಂಚರಂತಿ। ತಸ್ಮಾನ್ಮಂಡೂಕಲುಬ್ಧಸ್ಯ ಕಾಲಸರ್ಪಸ್ಯ ಮೂಷಿಕ ಇವ ಅಭಿಮುಖಾಪತಿತೋ ವಧ್ಯ ಇದಾನೀಂ ಭವಿಷ್ಯಾಮಿ। ತ್ವಮಿಹ ಉಪವಿಷ್ಟಃ ಕಿಂ ಕರಿಷ್ಯಸಿ?। (ಏತೇನ ವಿಟಾದೀನಾಂ ಪ್ರವೇಶಂ ಸೂಚಯತಿ)
("ನಾಸೂಚಿತಸ್ಯ ಪ್ರವೇಶಃ" ಇತಿ)

ಚಾರುದತ್ತಃ:— ಭವತು ತಿಷ್ಠ ತಾವತ್। ಅಹಂ ಸಮಾಧಿಂ ನಿರ್ವರ್ತಯಾಮಿ।

(ನೇಪಥ್ಯೇ।)

ತಿಷ್ಠ ವಸಂತಸೇನೇ ತಿಷ್ಠ।

(ತತಃ ಪ್ರವಿಶತಿ ವಿಟಶಕಾರಚೇಟೈರನುಗಮ್ಯಮಾನಾ ವಸಂತಸೇನಾ।)

ವಿಟಃ:— ವಸಂತಸೇನೇ ತಿಷ್ಠ ತಿಷ್ಠ।

ಕಿಂ ತ್ವಂ ಭಯೇನ ಪರಿವರ್ತಿತಸೌಕುಮಾರ್ಯಾ ನೃತ್ಯಪ್ರಯೋಗವಿಶದೌ ಚರಣೌ ಕ್ಷಿಪಂತೀ।
ಉದ್ವಿಗ್ನಚಂಚಲಕಟಾಕ್ಷವಿಸೃಷ್ಟದೃಷ್ಟಿರ್ವ್ಯಾಧಾನುಸಾರಚಕಿತಾ ಹರಿಣೀವ ಯಾಸಿ ॥

(ಶಕಾರಭಾಷಾಯಾಂ ಚವರ್ಗಶಕಾರಸ್ಥಿತೋಽಂತಸ್ಥೋ ಯಕಾರೋ ಲೋಪ್ಯಃ। "ಷ್ಠಸ್ಯ ಷ್ಟ ತಾಲವ್ಯ" ಇತಿ ವಚನಾತ್। ನ ಚ ಸಂಯೋಗಃ ಪ್ರಯತ್ನಲಾಘವಾತ್ ಪೂರ್ವಸ್ಯ ಗುರುತ್ವಂ ನ ಕರೋತಿ। ಚ್ಯಿಷ್ಠ ತಿಷ್ಠ ॥)

ಶಕಾರಃ:— ಚ್ಯಿಷ್ಠ ವಶಂತಶೇಣಿಏ, ಚ್ಯಿಷ್ಠ।
ಕಿಂಯಾಶಿ ಧಾವಶಿ ಪಲಾಅಶಿ ಪಕ್ಖಲಂತೀ
ವಾಶೂ ಪಶೀದ ಣ ಮಲಿಸ್ಸಶಿ ಚಿಟ್ಠ ದಾವ।
ಕಾಮೇಣ ದಜ್ಝದಿ ಹು ಮೇ ಹದಕೇ ತವಶ್ಶೀ
ಅಂಗಾಲಲಾಶಿಪಡಿದೇ ವಿಅ ಮಂಶಖಂಡೇ ॥18॥ (ವೃ. ತಿ. ನೋ)

ಪ್ರಸ್ಖಲನಂ=ನಿಮ್ನೋನ್ನತಾದೌ ಗತಿವಿಘಟನಂ॥
ತವಶ್ಶೀ=ವರಾಕಃ

ಚೇಟಃ:— ಆರ್ಯೇ ತಿಷ್ಠ ತಿಷ್ಠ।
ಉತ್ತ್ರಾಸಿತಾ ಗಚ್ಛಸ್ಯಂತಿಕಾನ್ಮಮ ಸಂಪೂರ್ಣಪಕ್ಷೇವ ಗ್ರೀಷ್ಮಮಯೂರೀ।
ಅವವಲ್ಗತಿ ಸ್ವಾಮಿ ಭಟ್ಟಾರಕೋ ಮಮ ವನೇಗತಃ ಕುಕ್ಕುಟಶಾವಕ ಇವ ॥

కిం యాసి ధావసి పలాయసే ప్రస్ఖలంతీ
బాలే ప్రసీద న పతిష్యతి తస్య తావత్ ।
కామేన దహ్యతే ఖలు మే హృదయం తపస్వి
అంగారరాశిపతితమివ మాంసఖండం॥ ।8॥

॥ 23 ॥ ವೇಶೋ ವೇಶ್ಯಾಜನಾಶ್ರಯಃ। ಸಮೇಶನಿಂಯಾ ಶೋಭನಾನಾಂ
ವೇಶಾನಾಮಲಂಕಾರಣೀಂ ನಿಲಯ ಆಶ್ರಯೋ ಯಸ್ಯಾಂ ನಾ। ವೇಶಾಂಗನಾ॥
ವೇಶನಾ। ವೇಶೋಽಸ್ಯಾಸ್ತೀತಿ ವೇಶಕೀ॥ ಏತಾನ್ಯಸ್ಯಾ ದಶನಾಮಕಾನಿ
ಕೃತಾನಿ। ಅದ್ಯಾಪಿ ಮಾಂ ನೇಚ್ಛತಿ। ಯದಿ ದೇವತಾಯಾ ಅಷ್ಟ ದಶ-
ದ್ವಾದಶ ನಾಮಾನಿ ಪಠ್ಯಂತೇ ತದಾ ಸಾ ಪ್ರಸನ್ನಾ ಭವತಿ। ಇಯಂ ತ್ವೇತಾ-
ವತಾಪಿ ನ ಪ್ರಸನ್ನೇತಿ ಭಾವಃ। ಅತ್ರ ಪ್ರಮಾದೋಽತ್ರಗಧರಯೋಃ
ಏಷೈಷೇತಿ ಪುನರುಕ್ತಂ। ನ್ಯೂನಮಧಿಕಂ ವಾ ವೃತ್ತಂ। ದಶೇತಿ ವ್ಯರ್ಥಂ॥

---

※ (೧ನೇ ಪುಟ)

ಶಕಾರಃ–
ಅಸ್ಮಾಭಿಶ್ಚಂಡಮಭಿಸಾರ್ಯಮಾಣಾ ಶೃಗಾಲೀವ ಕುಕ್ಕುರೈಃ।
ಪಲಾಯಸೇ ಶೀಘ್ರಂ ತ್ವರಿತಂ ಸವೇಗಂ ಸವೃಂತಂ ಮಮ ಹೃದಯಂ
ಹರಂತೀ॥

ವಸಂತಸೇನಾ— ಪಲ್ಲವಕ ಪಲ್ಲವಕ, ಪರಭೃತಿಕೇ ಪರಭೃತಿಕೇ

ಶಕಾರಃ–(ಸಭಯಂ) ಭಾವ, ಭಾವ, ಮನುಷ್ಯ ಮನುಷ್ಯಃ

ವಿಟಃ– ನ ಭೇತವ್ಯಂ, ನ ಭೇತವ್ಯಂ।

ವಸಂತಸೇನಾ– ಮಾಧವಿಕೇ ಮಾಧವಿಕೇ.

ವಿಟಃ–(ಸಹಾಸಂ) ಮೂರ್ಖ ಪರಿಜನೋಽನ್ವಿಷ್ಯತಿ

ಶಕಾರಃ– ಭಾವ ಭಾವ ಸ್ತ್ರಿಯಮನ್ವೇಷಯತಿ?

ವಿಟಃ– ಅಥ ಕಿಂ?

ಶಕಾರಃ– ಸ್ತ್ರೀಣಾಂ ಶತಂ ಮಾರಯಾಮಿ। ಶೂರೋಽಹಂ।

ವಸಂತಸೇನಾ—(ಶೂನ್ಯಮವಲೋಕ್ಯ) ಹಾ ಧಿಕ್ ಹಾ ಧಿಕ್ ಕಥಂ ಪರಿ-
ಜನೋಽಪಿ ಪರಿಭ್ರಷ್ಟಃ। ಅತ್ರ ಮಯಾತ್ಮಾ ಸ್ವಯಮೇವ
ಪರಿರಕ್ಷಿತವ್ಯಃ।

ವಿಟಃ– ಅನ್ವಿಷ್ಯತಾಮನ್ವಿಷ್ಯತಾಂ।

ಶಕಾರಃ— ವಸಂತಸೇನಿಕೇ ವಿಲಪ ವಿಲಪ ಪರಭೃತಿಕಾಂ ವಾ ಪಲ್ಲವಕಂ
ವಾ ಸರ್ವಂ ವಾ ವಸಂತಮಾಸಂ। ಮಯಾಭಿಸಾರ್ಯಮಾಣಾಂ ತ್ವಾಂ ಕಃ ಪರಿತ್ರಾಸ್ಯತೇ
ಕಿಂ ಭೀಮಸೇನೋ ಜಮದಗ್ನಿಪುತ್ರಃ ಕುಂತೀಸುತೋ ವಾ ದಶಕಂಧರೋ ವಾ।
ಏಷೋಽಹಂ ಗೃಹೀತ್ವಾ ಕೇಶಹಸ್ತೇ ದುಃಶಾಸನಸ್ಯಾನುಕೃತಿಂ ಕರೋಮಿ"॥
ನ ಕ್ರೀಷಸ್ವ ಸನಾ ಕ್ರೀಷಸವ (ಇಂದ್ರವಜ್ರಾ)

ಶಕಾರ—ಎಲೇ, ಒಡವೆಗಳನ್ನು ಝಣಝಣ ಎಂದು ಶಬ್ದಮಾಡುತ್ತಾ ರಾಮನನ್ನು ಕಂಡು ಹೆದರಿದ ದ್ರೌಪದಿಯಂತೆ ಓಡಬೇಡ. ವಿಶ್ವಾವಸುವಿನ ತಂಗಿಯಾದ ಸುಭದ್ರೆಯನ್ನು ಹನುಮಂತನು ಅಪಹರಿಸಿಕೊಂಡು ಹೋದಹಾಗೆ ನಾನು ನನ್ನ ಶಕ್ತಿಯನ್ನೆಲ್ಲ ತೋರಿಸಿ ನಿನ್ನನ್ನು ಅಪಹರಿಸಿಕೊಂಡೇ ಹೋಗುವೆನು.

ಚೇಟ—ರಾಜವಲ್ಲಭನಾದ ಶಕಾರನೊಡನೆ ಕ್ರೀಡಿಸು. ನಿನಗೆ ಬೇಕಾದಷ್ಟು ಮತ್ಸ್ಯಮಾಂಸಗಳು ಸಿಕ್ಕುವುವು.

ವಸಂತಸೇನೆ—ಪಲ್ಲವಿಕೆ! ಪಲ್ಲವಿಕೆ! ಪರಭೃತಿಕೆ! ಪರಭೃತಿಕೆ!

ಶಕಾರ—ಅಲ್ಲ ಅಲ್ಲ, ಮನುಷ್ಯರು.

ವಿಟ—(ವಸಂತಸೇನೆಯನ್ನು ಕುರಿತು) ಹೆದರಬೇಡ ಹೆದರಬೇಡ.

ವಸಂತಸೇನೆ—ಮಾಧವಿಕೆ! ಮಾಧವಿಕೆ!

ವಿಟ—(ನಕ್ಕು) ಎಲಾ ಮೂರ್ಖ, ಪಲ್ಲವಿಕೆಯೆಂದರೆ ಚಿಗುರೆಂದೂ ಪರಭೃತಿಕೆಯೆಂದರೆ ಕೋಗಿಲೆಯೆಂದೂ ತಿಳಿದುಕೊಂಡೆಯಾ? ಅಯ್ಯೋ! ಮರುಳೇ, ಅವಳು ತನ್ನ ಸೇವಕರನ್ನು ಕೂಗುತ್ತಾಳೆ; ಕಾಣೋ.

ಶಕಾರ—ಸ್ತ್ರೀಯರನ್ನು ಕರೆಯುತ್ತಾಳೊ?

ವಿಟ—ಅಹುದು.

ಶಕಾರ—ಕರೆಯಲಿ, ಆದರೇನು, ಶೂರನಾದ ನಾನು ನೂರುಜನ ಹೆಂಗಸರು ಬಂದರೂ ಕೊಂದುಹಾಕಬಲ್ಲೆನು.

ವಸಂತಸೇನೆ—(ಗಾಬರಿಯಿಂದ ಸುತ್ತಲೂ ನೋಡಿ) ಅಯ್ಯೋ! ಕಷ್ಟ ಕಷ್ಟ! ಪರಿಜನಗಳೂ ತಪ್ಪಿಸಿಕೊಂಡರೆ?. ಈಗ ನನ್ನ ಶರೀರವನ್ನು ನಾನೇ ರಕ್ಷಿಸಿಕೊಳ್ಳಬೇಕಾಯಿತು.

ಶಕಾರ—ಎಲೆ ವಸಂತಸೇನೆ, ಪಲ್ಲವಿಕೆಯನ್ನಾದರೂ ಕೂಗು. ಪರಭೃತಿಕೆಯನ್ನಾದರೂ ಕೂಗು. ಅಥವಾ ವಸಂತಋತುವನ್ನೇ ಕೂಗು. ಬೆನ್ನಟ್ಟಿಬರುತ್ತಿರುವ ನನ್ನನ್ನು ತಿರಸ್ಕರಿಸಿ ಯಾರುತಾನೆ ನಿನ್ನನ್ನು ರಕ್ಷಿಸುವರು. ಆ ಜಮದಗ್ನಿಯ ಮಗನಾದ ಭೀಮಸೇನನೇ ಬರಲಿ. ಅಥವಾ ಕುಂತಿಯ ಮಗನಾದ ರಾವಣಾಸುರನೇ ಬರಲಿ. ನಿನ್ನ ತಲೆಕೂದಲುಗಳನ್ನು ಹಿಡಿದು ದುಶ್ಶಾಸನನು ಮಾಡಿದಂತೆ ಮಾಡುವೆನು.

ಓಡಬೇಡ ನಿಲ್ಲುನಿಲ್ಲು. ಇದೋ, ನೋಡು, ಕತ್ತಿಯು ಹರಿತವಾಗಿರುವುದು. ನಿನ್ನ ತಲೆ ನನ್ನ ಕೈಗೆ ಸಿಕ್ಕಿದೆ, ಏನು ? ಕತ್ತರಿಸಲೋ ? ಅಥವಾ ನಾನು ಹೇಳಿದಂತೆ ಕೇಳುವೆಯೊ ?

ವಿಟ—ಆಃ ! ಇವನೆಂತಹ ಶೂರ. ಭಾರತರಾಮಾಯಣಗಳನ್ನೆಲ್ಲಾ ತಲೆಕೆಳಗು ಮಾಡಿರುವಹಾಗೆ ಕಾಣುವುದು.

ವಸಂತಸೇನೆ—ಆರ್ಯನೆ, ನಾನು ಸ್ತ್ರೀ.

ಶಕಾರ—ಆದುದರಿಂದಲೇ ನಿನ್ನನ್ನು ಕೊಲ್ಲದೆ ಬಿಟ್ಟುದು.

ವಸಂತಸೇನೆ—(ಸ್ವಗತ) ಇವನ ಸಮಾಧಾನೋಕ್ತಿಯೂ ಕೂಡ ಭಯವನ್ನೇ ಹುಟ್ಟಿಸುತ್ತಿರುವುದು. ಇರಲಿ. (ಪ್ರಕಾಶಂ) ಆರ್ಯನೆ, ಈ ಮಾತಿನಿಂದ ನನ್ನ ಒಡವೆಗಳಲ್ಲಿ ನಿನಗಪೇಕ್ಷೆಯಿರುವಂತೆ ತೋರುವುದು.

ವಿಟ—ಶಿವಶಿವ ! ವಸಂತಸೇನೆಯೆ ! ಉದ್ಯಾನಲತೆಗಲಂಕಾರವಾಗಿರುವ ಹೂಗಳನ್ನು ಅಪಹರಿಸುವುದು ಯುಕ್ತವೆ ? ಆದುದರಿಂದ ನಿನ್ನ ಒಡವೆಗಳ ಮಾತು ಹಾಗಿರಲಿ.

ವಸಂತಸೇನೆ—ಆದರೆ ಇನ್ನೇನು ?

ಶಕಾರ—ನಾನು ದೇವಪುರುಷ, ಮನುಷ್ಯ, ವಾಸುದೇವ ; ನನ್ನನ್ನು ವರಿಸು.

ವಸಂತಸೇನೆ—(ಕೋಪದಿಂದ) ಛಿಃ ಛಿಃ ! ನಾನು ನಿನಗೆ ದುರ್ಲಭೆಯು. ಏತಕ್ಕೆ ಬಳಲುವೆ ? ಹೋಗು. ಕೆಟ್ಟಮಾತನ್ನಾಡಬೇಡ.

ಶಕಾರ—(ಚಪ್ಪಾಳೆಹಾಕಿ ನಕ್ಕು) ಎಲೋ ಭಾವ ! ಈ ಸೂಳೆಯ ಮಗಳು ನನ್ನಲ್ಲಿ ವಿಶ್ವಾಸವಿಟ್ಟು ಹೇಳಿದ ಮಾತನ್ನು ಕೇಳಿದೆಯಾ ? "ಶ್ರಮಪಟ್ಟಿದ್ದೀಯೆ, ಬಳಲಿದ್ದೀಯೆ" ಎಂದು ಹೇಳುವಳು. ನಾನು ಯಾವ ಊರಿಗೂ ಹೋಗಲಿಲ್ಲ. ಯಾವ ಪಟ್ಟಣಕ್ಕೂ ಹೋಗಲಿಲ್ಲ. ನನಗೆ ನಿನ್ನ ಹಿಂದೆಹಿಂದೆ ಸುತ್ತುವ ಆಯಾಸವೊಂದೇ.

ವಿಟ—ವಸಂತಸೇನೆ, ನೀನು ಸೂಳೆಯರ ಪದ್ಧತಿಗೆ ವಿರುದ್ಧವಾಗಿ ಹೇಳುವೆ, ಕೇಳು :—

ಕಂದ ‖ ಆರಯೆ ಮಾರ್ಗದ ಲತೆಗಳ್ !
ವಾರಾಂಗನೆಯರ್ಕಳವರೊಡರ್ ಧನಲಭ್ಯಂ ‖

(ವಂಶಸ್ಥೇಂದ್ರವಜ್ರೋಪೇಂದ್ರವಜ್ರಾದಿಭಿರ್ದ್ವಾದಶಾಕ್ಷರಪಾದವರ್ಗೈರ್ವಿನಿರ್ಮಿತಾ ಜಾತಿಃ)

ಅಸಿಃ ಸುತೀಕ್ಷ್ಣೋ ವಲಿತಂ ಚ ಮಸ್ತಕಂ
ಕಲ್ಪಯೇ ಸ್ಕಂಧಮುತ ಮಾರಯಾಮಿ ವಾ।
ಅಲಂ ತವಾತ್ಯಂತವಿಪಲಾಯಿತೇನ ಮುಮೂರ್ಷುರ್ಯೋ
ಭವತಿ ನ ಖಲು ಜೀವತಿ॥

ವಲಿತಂ = ಉಲಿತಃ।
ಕಲ್ಪಯೇ = ಛಿನದ್ಮಿ।

ವಸಂತಸೇನಾ — ಆರ್ಯ, ಅಬಲಾ ಖಲ್ವಹಂ।
ವಿಟಃ — ಅತ ಏವ ಧ್ರಿಯಸೇ।
ಶಕಾರಃ — ಅತ ಏವ ನ ಮಾರ್ಯಸೇ
ವಸಂತಸೇನಾ — (ಸ್ವಗತಂ) ಕಥಮನುನಯೋಽಪ್ಯಸ್ಯ ಭಯಮೇವೋತ್ಪಾದಯತಿ। ಭವತು। ಏವಂ ತಾವತ್। (ಪ್ರಕಾಶಂ) ಆರ್ಯ, ಅಸ್ಮಿನ್ ಕಿಮಪ್ಯಲಂಕರಣಂ ತರ್ಕ್ಯತೇ
ವಿಟಃ — ಶಾಂತಂ। ಭವತಿ ವಸಂತಸೇನೇ, ನ ಪುಷ್ಪಮೋಷಮರ್ಹತ್ಯುದ್ಯಾನಲತಾ। ತತ್ಕೃತಮಲಂಕರಣೈಃ।
ವಸಂತಸೇನಾ — ತತ್ಕಿಂ ಖಲ್ವಿದಾನೀಂ?
ಶಕಾರಃ — ಅಹಂ ವರಪುರುಷಮನುಷ್ಯೋ ವಾಸುದೇವಃ ಕಾಮಯಿತವ್ಯಃ।
ವಸಂತಸೇನಾ — (ಸಕ್ರೋಧಂ) ಶಾಂತಂ ಶಾಂತಂ। ಅಪೇಹಿ। ಅನಾರ್ಯಂ ಮಂತ್ರಯಸಿ। (ಅನಾರ್ಯಂ = ಅನರ್ಹಂ).
ಶಕಾರ — (ಸತಾಲಂ ವಿಹಸ್ಯ) ಭಾವ, ಭಾವ, ಪ್ರೇಕ್ಷಸ್ವ ತಾವತ್। ಮಾಮಂತರೇಣ ಸುಸ್ನಿಗ್ಧೈಷಾ ಗಣಿಕಾದಾರಿಕಾ ನನು। ಯೇನ ಮಾಂ ಭಣತಿ — "ಏಹಿ। ಶ್ರಾಂತೋಽಸಿ। ಕ್ಲಾಂತೋಽಸಿ" ಇತಿ। ಅಹಂ ನ ಗ್ರಾಮಾಂತರಂ ನ ನಗರಾಂತರಂ ವಾ ಗತಃ। ಭಟ್ಟಾಲಕೇ, ಶಪೇ ಭಾವಸ್ಯ ಶೀರ್ಷಮಾತ್ಮೀಯಾಭ್ಯಾಂ ಪಾದಾಭ್ಯಾಂ। ತವೈವ ಪೃಷ್ಠಾನುಪೃಷ್ಠಿಕಯಾ ಹಿಂಡಮಾನಃ ಶ್ರಾಂತಃ ಕ್ಲಾಂತೋಽಸ್ಮಿ ಸಂವೃತ್ತಃ।
ವಿಟ — (ಸ್ವಗತಂ) ಅಹೋ, ಕಥಂ ಶಾಂತಮಿತ್ಯಭಿಹಿತೇ ಶ್ರಾಂತ ಇತ್ಯವಗಚ್ಛತಿ ಮೂರ್ಖಃ। (ಪ್ರಕಾಶಂ) ವಸಂತಸೇನೇ ವೇಶವಾಸವಿರುದ್ಧಮಭಿಹಿತಂ ಭವತ್ಯಾ। ಪಶ್ಯ।

ತರುಣಜನಸಹಾಯಶ್ಚಿಂತ್ಯತಾಂ ವೇಶವಾಸೋ
ವಿಗಣಯ ಗಣಿಕಾ ತ್ವಂ ಮಾರ್ಗಜಾತಾ ಲತೇವ।

ವಹಸಿ ಹಿ ಧನಹಾರ್ಯಂ ಪಣ್ಯಭೂತಂ ಶರೀರಂ
ಸಮಮುಪಚರ ಭದ್ರೇ ಸುಪ್ರಿಯಂ ಚಾಪ್ರಿಯಂ ಚ॥ 31।

ಅಪಿ ಚ।
ವಾಪ್ಯಾಂ ಸ್ನಾತಿ ವಿಚಕ್ಷಣೋ ದ್ವಿಜವರೋ ಮೂರ್ಖೋಽಪಿ ವರ್ಣಾಧಮಃ
ಫುಲ್ಲಾಂ ನಾಮ್ಯತಿ ವಾಯಸೋಽಪಿ ಹಿ ಲತಾಂ ಯಾ ನಾಮಿತಾ ಬರ್ಹಿಣಾ।
ಬ್ರಹ್ಮಕ್ಷತ್ರವಿಶಸ್ತರಂತಿ ಚ ಯಯಾ ನಾವಾ ತಯೈವೇತರೇ
ತ್ವಂ ವಾಪೀವ ಲತೇವ ನೌರಿವ ಜನಂ ವೇಶ್ಯಾಸಿ ಸರ್ವಂ ಭಜ॥ 32॥

ವಸಂತಸೇನಾ — ಗುಣಃ ಖಲ್ವನುರಾಗಸ್ಯ ಕಾರಣಂ ನ ಪುನರ್ಬಲಾತ್ಕಾರಃ।

ಶಕಾರಃ — ಭಾವ, ಭಾವ, ಏಷಾ ಗರ್ಭದಾಸೀ ಕಾಮದೇವಾಯತನೋದ್ಯಾನಾತ್ಪ್ರಭೃತಿ ತಸ್ಯ ದರಿದ್ರಚಾರುದತ್ತಸ್ಯ ಅನುರಕ್ತಾ ನ ಮಾಂ ಕಾಮಯ[ತೇ]। ವಾಮತಸ್ತಸ್ಯ ಗೃಹಂ। ಯಥಾ ತವ ಮಮ ಚ ಹಸ್ತಾನ್ನೈಷಾ ಪರಿಭ್ರಶ್ಯತಿ ತಥಾ ಕರೋತು ಭಾವಃ।

ವಿಟಃ — (ಸ್ವಗತಂ) ಯದೇವ ಪರಿಹರ್ತವ್ಯಂ ತದೇವೋದಾಹರತಿ ಮೂರ್ಖಃ। ಕಥಂ ವಸಂತಸೇನಾರ್ಯಚಾರುದತ್ತಮನುರಕ್ತಾ। ಸುಷ್ಠು ಖಲ್ವಿದಮುಚ್ಯತೇ। — ರತ್ನಂ ರತ್ನೇನ ಸಂಗಚ್ಛತೇ ಇತಿ। ತದ್ಗಚ್ಛತು। ಕಿಮನೇನ ಮೂರ್ಖೇಣ। (ಪ್ರಕಾಶಂ) ಕಾಣೇಲೀಮಾತಃ, ವಾಮತಸ್ತಸ್ಯ ಸಾರ್ಥವಾಹಸ್ಯ ಗೃಹಂ? (ಕಾಣೇಲೀ ಕನ್ಯಕಾಮಾತಾ) (ಅಸತೀ ಕಾಣೇಲೀ ಇತ್ಯೇಕೇ)

ಶಕಾರಃ — ಅಥ ಕಿಂ ವಾಮತಸ್ತಸ್ಯ ಗೃಹಂ.

ವಸಂತಸೇನಾ — (ಸ್ವಗತಂ) ಆಶ್ಚರ್ಯಂ ವಾಮತಸ್ತಸ್ಯ ಗೃಹಮ್ ಇತಿ ಯತ್ಸತ್ಯಂ। ಅಪರಾಧ್ಯತಾಪಿ ದುರ್ಜನೇನೋಪಕೃತಂ ಯೇನ ಪ್ರಿಯಸಂಗಮಃ ಪ್ರಾಪಿತಃ।

ಶಕಾರಃ — ಭಾವ, ಭಾವ, ಬಲೀಯಸಿ ಖಲ್ವಂಧಕಾರೇ ಮಾಷರಾಶಿಪ್ರವಿಷ್ಟೇವ ಮಷೀಗುಟಿಕಾ ದೃಶ್ಯಮಾನೈವ ಪ್ರನಷ್ಟಾ ವಸಂತಸೇನಾ

ವಿಟಃ — ಅಹೋ, ಬಲವಾನಂಧಕಾರಃ। ತಥಾಹಿ।
ಆಲೋಕವಿಶಾಲಾ ಮೇ ಸಹಸಾ ತಿಮಿರಪ್ರವೇಶವಿಚ್ಛಿನ್ನಾ।
ಉನ್ಮೀಲಿತಾಪಿ ದೃಷ್ಟಿರ್ನಿಮೀಲಿತೇವಾಂಧಕಾರೇಣ॥

ಅಪಿ ಚ — ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ।
ಅಸತ್ಪುರುಷಸೇವೇವ ದೃಷ್ಟಿರ್ನಿಷ್ಫಲತಾಂ ಗತಾ॥

ಶಕಾರ — ಭಾವ ಭಾವ ಅನ್ವೇಷಾಮಿ ವಸಂತಸೇನಿಕಾಂ
ವಿಟ — ಕಾಣೇಲೀಮಾತಃ, ಅಸ್ತಿ ಕಿಂಚಿಚ್ಚಿಹ್ನಂ

ಆರಾದೊಡೇನೊ ಧನಮಂ ।
ಸೂರೆಯನಿತ್ತವನನಾದರಿಪ್ಪುದೆ ಧರ್ಮಂ ॥

ವಸಂತಸೇನೆ—ಅನುರಾಗಕ್ಕೆ ಗುಣವೇ ಕಾರಣವಲ್ಲದೆ ಬಲಾತ್ಕಾರವಲ್ಲವಷ್ಟೆ ?

ಶಕಾರ—ಎಲೊ, ಭಾವ, ಇವಳು ಕಾಮದೇವಾಯತನೋದ್ಯಾನ ಮೊದಲು ಮಾಡಿಕೊಂಡು ನಾನು ಜತೆಯಲ್ಲೇ ಬಂದರೂ ಲಕ್ಷ್ಯಮಾಡದೆ ಆ ದರಿದ್ರನಾದ ಚಾರುದತ್ತನಲ್ಲಿಯೇ ಅನುರಕ್ತೆಯಾಗಿ ನನ್ನನ್ನು ಉಪೇಕ್ಷಿಸಿರುವಳು. ಇನ್ನು ಬೆನ್ನಟ್ಟಿ ಹೋಗುವುದರಿಂದ ಫಲವಿಲ್ಲ. ಇದೋ ನೋಡು, ಎಡಗಡೆಯೇ ಅವನ ಮನೆ. ಅವಳು ತಪ್ಪಿಸಿಕೊಂಡು ಒಳಕ್ಕೆ ಹೋಗದಂತೆ ನಾವಿಬ್ಬರೂ ಹಿಡಿದುಕೊಳ್ಳೋಣ.

ವಿಟ—(ಸ್ವಗತ) ಅಯ್ಯೋ ! ಈ ಗಾಢಾಂಧಕಾರದಲ್ಲಿ ಮನೆಯ ಗುರುತು ತಿಳಿಯದೆ ಪೇಚಾಡುತ್ತಿದ್ದ ಇವಳಿಗೆ ಈ ಮೂರ್ಖನು ಅವನ ಮನೆ ಎಡಗಡೆ ಎಂದು ತಾನೇ ಹೇಳಿಕೊಡುವನಲ್ಲಾ ! ಇರಲಿ, ವಸಂತಸೇನೆಯು ಶ್ರೇಷ್ಠನಾದ ಚಾರುದತ್ತನಲ್ಲಿ ಅನುರಕ್ತೆಯಾಗಿರುವಳೇ ? ರತ್ನವು ರತ್ನದೊಡನೆ ಸೇರಿದರೆ ತಾನೆ ಶೋಭಿಸುವುದು. ಅವಳು ಹೊರಟುಹೋಗಲಿ. ಈ ಮೂರ್ಖನನ್ನು ಕಟ್ಟಿಕೊಂಡೇನು ಫಲ. (ಪ್ರಕಾಶಂ) ಎಲೋ ಅಮ್ಮಣ್ಣಿಯ ಮಗನೆ, ಆ ಸಾಹುಕಾರನ ಮನೆ ಎಡಗಡೆಯೇನೋ ?

ಶಕಾರ—ಅಹುದು. ಎಡಗಡೆಯೇ. ತಪ್ಪೇನು ?

ವಸಂತಸೇನೆ–ನನಗೆ ಅಪಕಾರಮಾಡಬೇಕೆಂದಿದ್ದರೂ ಎಡಗಡೆಯೇ ಆತನ ಮನೆಯೆಂದು ಹೇಳಿದುದರಿಂದ ಉಪಕಾರವೇ ಆಯಿತು.

ಶಕಾರ—ಭಾವ, ಭಾವ, ಕತ್ತಲೆ ಬಲವಾಯಿತು. ಉದ್ದಿನ ರಾಶಿಯಲ್ಲಿ ಬಿದ್ದ ಇದ್ದಲು ತುಂಡಿನಂತೆ ವಸಂತಸೇನೆಯು ಎಲ್ಲೋ ಮಾಯವಾದಳು.

ವಿಟ—ನಿಜ, ಅಂಧಕಾರವು ಬಲವಾಯಿತು. ಕಣ್ಣುಗಳನ್ನು ಬಿಟ್ಟುಕೊಂಡಿದ್ದರೂ ಮುಚ್ಚಿಕೊಂಡಂತೆಯೇ ಇರುವುದು.

ಶಕಾರ—ಭಾವ, ವಸಂತಸೇನೆಯನ್ನು ಹುಡುಕುವೆನು.

ವಿಟ—ಎಲೋ, ಕಾಣೇಲಿ ಕೂಸೆ, ಅವಳು ಕತ್ತಲೆಯಲ್ಲಿದ್ದರೂ

ನಮಗೆ ಗೊತ್ತಾಗುವ ಹಾಗೆ ಏನಾದರೂ ಒಂದು ಗುರುತನ್ನು ಬಲ್ಲೆಯೇನೋ ?

ಶಕಾರ—ಭಾವ, ಗುರುತೆಂದರೇನೊ ?

ವಿಟ—ಅಯ್ಯೋ ? ಬೆಪ್ಪೆ ! ಗುರುತೆಂದರೆ ಕಾಲುಕಡಗದ ಶಬ್ದ. ಅಥವಾ ಅವಳು ಮುಡಿದಿರುವ ಪರಿಮಳದ ಹೂವಿನ ವಾಸನೆ.

ಶಕಾರ—ವಾಸನೆಯಂತೂ ಕೇಳಿಸುವುದು. ಮೂಗಿನಲ್ಲಿ ಕತ್ತಲೆ ಕವಿದುಕೊಂಡಿರುವುದರಿಂದ ಭೂಷಣಶಬ್ದವನ್ನು ನೋಡುವುದಕ್ಕೆ ಆಗುವುದಿಲ್ಲ.

ವಿಟ—(ಗುಟ್ಟಾಗಿ) ವಸಂತಸೇನೆಯೆ, ಎಲ್ಲಿರುವೆ ? ಮೇಘಮಧ್ಯದಲ್ಲಿ ಅಡಗಿಕೊಂಡಿರುವ ಮಿಂಚಿನೋಪಾದಿಯಲ್ಲಿ ನೀನು ಈ ಅಂಧಕಾರದಿಂದ ಕಾಣಿಸದಿದ್ದರೂ ಪುಷ್ಪಗಂಧವೂ ಭೂಷಣಶಬ್ದವೂ ನಿನ್ನ ನೆಲೆಯನ್ನು ಸೂಚಿಸುವುವು. ನಾನು ಹೇಳಿದಮಾತು ಕೇಳಿಸಿತೊ ?

ವಸಂತಸೇನೆ—(ಗುಟ್ಟಾಗಿ) ಕೇಳಲೂ ಕೇಳಿದೆ. ಅದರ ಅಭಿಪ್ರಾಯವನ್ನೂ ತಿಳಿದುಕೊಂಡೆ. (ಒಡವೆಗಳನ್ನೆಲ್ಲ ಮೈಮೇಲಿಂದ ತೆಗೆದು ಗಂಟಿಕ್ಕಿ ಮುಂದೆನೋಡಿ) ಭಾಪು ಭಾಪು, ತಡವರಿಸುತ್ತ ಬಂದುದರಿಂದ ಈ ದಿಡ್ಡಿಯ ಬಾಗಿಲು ಸಿಕ್ಕಿತು. ಬಾಗಿಲು ಮಾತ್ರ ಮುಚ್ಚಿರುವುದು. (ಹೋಗುವಳು.)

ಶಕಾರ—ಭಾವ, ವಸಂತಸೇನೆಯನ್ನು ಹುಡುಕುವೆನು.

ವಿಟ—ಹುಡುಕು ಹುಡುಕು. (ಹೋಗುವರು.)

ಚಾರುದತ್ತ—(ಪ್ರವೇಶಿಸಿ) ಆಹ್ನಿಕವೆಲ್ಲ ನೆರವೇರಿತು. ನೀನು ಹೋಗಿ ಮಾತೃದೇವತೆಗಳಿಗೆ ಬಲಿಯಿತ್ತು ಬಾ.

ವಿದೂಷಕ—ಅಯ್ಯಾ, ನಾನು ಹೋಗುವುದಿಲ್ಲ.

ಚಾರುದತ್ತ—ಅಯ್ಯೋ ಕಷ್ಟಕಷ್ಟ. ನನ್ನನ್ನು ನೋಡಿದರೆ ನಿನಗೂ ಅಲಕ್ಷ್ಯವಾಯಿತೆ ? ಇದು ಸಹಜ. ಮನುಷ್ಯನಿಗೆ ದಾರಿದ್ರ್ಯ ಬಂದಾಗ ಅವನ ಮಾತುಗಳನ್ನು ಬಂಧುಗಳೂ ಕೇಳುವುದಿಲ್ಲ. ಸ್ನೇಹಿತರು ಕೈಬಿಡುವರು. ವಿಪತ್ತುಗಳೇ ಒದಗಿಬರುವವು. ಅವನಿಗೆ ಸಕಲವೂ ನಷ್ಟವಾಗುವುದು. ಯಾರೋ ಅಕಾರ್ಯಮಾಡಿದರೆ ಅದು ಇವನ ಮೇಲೆಯೇ ಆರೋಪಿತವಾಗುವುದು.

ಯದಾ ವಲಷೆಂಯಾಹಿ।

ಶಕಾರ— ಭಾವ ಭಾವ ಕಿಮಿದ।

ವಿಟ:— ಭೂಷಣಶಬ್ದಂ ಸೌರಭ್ಯಾನುವಿದ್ಧಂ ಮಾಲ್ಯಗಂಧಂ ಚ।

ಶಕಾರ— ಶೃಣೋಮಿ ಮಾಲ್ಯಗಂಧಂ, ಅಂಧಕಾರಪೂರಿತಯಾ ಪುನರ್ನಾಸಿಕಯಾ ನ ಸುವ್ಯಕ್ತಂ ಪಶ್ಯಾಮಿ ಭೂಷಣಶಬ್ದಂ।

ವಿಟ— (ಜನಾಂತಿಕಂ) ವಸಂತಸೇನೇ,

ಕಾಮಂ ಪ್ರದೋಷತಿಮಿರೇಣ ನ ದೃಶ್ಯಸೇ ತ್ವಂ
ಸೌದಾಮಿನೀವ ಜಲದೋದರಸಂಧಿಲೀನಾ।
ತ್ವಾಂ ಸೂಚಯಿಷ್ಯತಿ ತು ಮಾಲ್ಯಸಮುದ್ಭವೋಽಯಂ
ಗಂಧಶ್ಚ ಭೀರು ಮುಖರಾಣಿ ಚ ನೂಪುರಾಣಿ॥

ಶ್ರುತಂ ವಸಂತಸೇನೇ?

ವಸಂತಸೇನಾ— (ಸ್ವಗತಂ) ಶ್ರುತಂ ಗೃಹೀತಂ ಚ। ಪ್ರಕಾಶಂ, (ನಾಟ್ಯೇನ ನೂಪುರಾಣ್ಯುತ್ಸೃಜ್ಯ ಮಾಲ್ಯಾನಿ ಅಪನೀಯ ಕಿಂಚಿತ್ ಪರಿಕ್ರಮ್ಯ ಹಸ್ತೇನ ಪರಾಮೃಶ್ಯ) ಭಿತ್ತಿಪರಾಮರ್ಶಸೂಚಿತಂ ಪಕ್ಷದ್ವಾರಕಂ ಇದಂ। ಜಾನಾಮಿ ಚ ಸಂಯೋಗೇನ ಗೇಹಸ್ಯ ಸಂವೃತ್ತಂ ಪಕ್ಷದ್ವಾರಕಂ।

ಚಾರುದತ್ತ:— ವಯಸ್ಯ ಸಮಾಪ್ತಜಪೋಽಸ್ಮಿ। ತತ್ ಸಾಂಪ್ರತಂ ಗಚ್ಛ। ಮಾತೃಭ್ಯೋ ಬಲಿಮುಪಹರ।

ವಿದೂಷಕ:— ಭೋ:, ನ ಗಮಿಷ್ಯಾಮಿ। (7,8 ನೇ ಪು. ನೋಡಿ

ಚಾರುದತ್ತ:— ಧಿಕ್ ಕಷ್ಟಂ।

ಸಂಗುಪ್ತೈವ ಹಿ ಪಶ್ಯದಶ್ಯಾ ಕಾರುಣೇ ಸಂಭಾವ್ಯತೇ ನಾಮನಾ-

ದಾರಿದ್ರ್ಯಾತ್ಪುರುಷಸ್ಯ ಬಾಂಧವಜನೋ ವಾಕ್ಯೇ ನ ಸಂತಿಷ್ಠತೇ
ಸುಸ್ನಿಗ್ಧಾ ವಿಮುಖೀಭವಂತಿ ಸುಹೃದ: ಸ್ಫಾರೀಭವಂತ್ಯಾಪದ:।
ಸತ್ತ್ವಂ ಹ್ರಾಸಮುಪೈತಿ ಶೀಲಶಶಿನ: ಕಾಂತಿ: ಪರಿಮ್ಲಾಯತೇ
ಪಾಪಂ ಕರ್ಮ ಚ ಯತ್ಪರೈರಪಿ ಕೃತಂ ತತ್ತಸ್ಯ ಸಂಭಾವ್ಯತೇ॥ 36
(ಸ್ಫಾರೀಭವಂತಿ = ವರ್ಧೀ ಭವಂತಿ)

(ಪು. ತಿ. ನ.)

ಸಂಗಂ ನೈವ ಹಿ ಕಶ್ಚಿದಸ್ಯ ಕುರುತೇ ಸಂಭಾಷತೇ ನಾದರಾತ್
ಸಂಪ್ರಾಪ್ತೋ ಗೃಹಮುತ್ಸವೇಷು ಧನಿನಾಂ ಸಾವಜ್ಞಮಾಲೋಕ್ಯತೇ।
ದೂರಾದೇವ ಮಹಾಜನಸ್ಯ ವಿಹರತ್ಯಲ್ಪಚ್ಛದೋ ಲಜ್ಜಯಾ
ಮನ್ಯೇ ನಿರ್ಧನತಾ ಪ್ರಕಾಮಮಪರಂ ಷಷ್ಠಂ ಮಹಾಪಾತಕಂ॥

(ಅಲ್ಪಚ್ಛದಃ = ವಸ್ತ್ರವಿಹೀನಃ)

ವಿದೂಷಕ - (ಸವೈಲಕ್ಷ್ಯಂ) ಭೋ ವಯಸ್ಯ, ಉಂದಿಮಾಯಾಸಂತಪ್ಯಂ, ತದೇಷಾಪಿ ಮಮ ಸಹಾಯಿನೀ ರದನಿಕಾ ಭವತು।

ಚಾರುದತ್ತಃ - ರದನಿಕೆ ಚಾರುದತ್ತಮನುಗಚ್ಛ।

ಚೇಟೀ - ಯದಾರ್ಯ ಆಜ್ಞಾಪಯತಿ।

ವಿದೂಷಕ - ಭವತಿ ರದನಿಕೆ, ಗೃಹಾಣ ಬಲಿಂ ಪ್ರದೀಪಂ ಚ। ಅಹಮಪಾವೃತಂ ಪಕ್ಷದ್ವಾರಕಂ ಕರೋಮಿ। (ತಥಾ ಕರೋತಿ)

ವಸಂತಸೇನಾ - ಮಮಾಭ್ಯುಪಪತ್ತಿನಿಮಿತ್ತಮಿವಾಪಾವೃತಂ ಪಕ್ಷದ್ವಾರಕಂ। ತದ್ಯಾವತ್ ಪ್ರವಿಶಾಮಿ। (ದೃಷ್ಟ್ವಾ) ಹಾ ಧಿಕ್ ಹಾ ಧಿಕ್। ಕಥಂ ಪ್ರದೀಪಃ। (ಪಟಾಂತೇನ ನಿರ್ವಾಪ್ಯ ಪ್ರವಿಷ್ಟಾ।)

ಚಾರುದತ್ತಃ - ಮೈತ್ರೇಯ ಕಿಮೇತತ್?

ವಿದೂಷಕಃ - ಅಪಾವೃತಪಕ್ಷದ್ವಾರೇಣ ಪಿಂಡೀಭೂತೇನ ವಾತೇನ ನಿರ್ವಾಪಿತಃ ಪ್ರದೀಪಃ। ಭವತಿ ರದನಿಕೆ, ನಿಷ್ಕ್ರಮ (ನಿಷ್ಕ್ರಾಮ) ತ್ವಂ ಪಕ್ಷದ್ವಾರಕೇಣ ಅಹಮಪ್ಯಭ್ಯಂತರಚತುಃಶಾಲತಃ ಪ್ರದೀಪಂ ಪ್ರಜ್ವಾಲ್ಯಾಗಚ್ಛಾಮಿ।

ಶಕಾರ - ಭಾವ ಭಾವ ಅನ್ವೇಷಯಾಮಿ ವಸಂತಸೇನಿಕಾಂ

ವಿಟ - ಅನ್ವಿಷ್ಯತಾಮನ್ವಿಷ್ಯತಾಂ।

ಶಕಾರ - (ತಥಾ ಕೃತ್ವಾ) ಭಾವ ಭಾವ ಗೃಹೀತಾ

ವಿಟ - ಮೂರ್ಖ, ನನ್ವಹಂ?!

ಶಕಾರ - ಇತಸ್ತಾವತ್ ಭೂತ್ವಾ ಏಕಾಂತೇ ಭಾವಸ್ತಿಷ್ಠತು। (ಪುನರನ್ವಿಷ್ಯ ಚೇಟಂ ಗೃಹೀತ್ವಾ) ಭಾವ ಭಾವ, ಗೃಹೀತಾ ಗೃಹೀತಾ।

ಕಂದ॥ ಬಡತನಮುಡಸಿದಮಾನವ ।
ನೊಡನಾರುಂ ನುಡಿಯರಲ್ತೆ ಮಲಿನಾಂಬರನಾ ॥
ಗೆಡೆಯಾಡನಾತನದರಿಂ ।
ಬಡತನಮಾರನೆಯಪಾತಕಂ ಗಡಬಗೆಯಲ್ ॥

ವಿದೂಷಕ—ನಾನು ಹೋಗಬೇಕಾದರೆ ಜತೆಯಲ್ಲಿ ಈ ರದನಿಕೆಯನ್ನು ಕಳುಹಿಸು.

ಚಾರುದತ್ತ—ರದನಿಕೆ, ಮೈತ್ರೇಯನ ಸಂಗಡ ಹೋಗು.

ವಿದೂಷಕ—ರದನಿಕೆ, ಬಲಿಯನ್ನೂ ದೀಪವನ್ನೂ ತೆಗೆದುಕೊ. ನಾನು ಬಾಗಿಲನ್ನು ತೆಗೆಯುವೆನು. (ಬಾಗಿಲು ತೆಗೆಯುವನು.)

ವಸಂತಸೇನೆ—ನನ್ನ ಪುಣ್ಯದಿಂದ ಬಾಗಿಲು ತೆರೆದಿರುವುದು. ಒಳಕ್ಕೆ ಹೋಗುವೆನು.

(ರದನಿಕೆ ದೀಪವನ್ನು ತರುವಳು.)

ವಸಂತಸೇನೆ—ಹಾ! ಕಷ್ಟಕಷ್ಟ ಇದೇನು ದೀಪ! (ಸೆರಗಿನಿಂದ ಬೀಸಿ ಆರಿಸಿ ಒಳಕ್ಕೆ ಹೋಗುವಳು.)

ಚಾರುದತ್ತ—ಮೈತ್ರೇಯನೆ, ಇದೇನು?

ವಿದೂಷಕ—ಏನೂ ಇಲ್ಲ. ಬಾಗಿಲನ್ನು ತೆರೆದೆ. ಬಿರುಗಾಳಿ ಬಂದು ದೀಪವು ಆರಿಹೋಯಿತು. ರದನಿಕೆ, ನೀನು ಈ ಬಾಗಿಲಲ್ಲಿ ನಿಲ್ಲು. ನಾನು ಒಳಗೆ ಹೋಗಿ ದೀಪವನ್ನು ಹೊತ್ತಿಸಿಕೊಂಡು ಬರುವೆನು. (ಚಾರುದತ್ತನೊಡನೆ ಒಳಕ್ಕೆ ಹೋಗುವನು—ರದನಿಕೆ ಹೊರಗೆ ಬರುವಳು.)

ಶಕಾರ—(ಪ್ರವೇಶಿಸಿ) ಭಾವ, ವಸಂತಸೇನೆಯನ್ನು ಹುಡುಕುತ್ತೇನೆ.

ವಿಟ—ಹುಡುಕು, ಹುಡುಕು.

ಶಕಾರ—(ಹುಡುಕುತ್ತ ವಿಟನನ್ನು ಹಿಡಿದು) ಭಾವ, ಭಾವ! ಸಿಕ್ಕಿದಳು.

ವಿಟ—ಅಯ್ಯೋ! ನಾನು ಕಾಣೆೊ?

ಶಕಾರ—ನೀನೆ? ಹಾಗಾದರೆ ನೀನು ಗೊತ್ತಾಗಿ ಇಲ್ಲಿಯೇ ನಿಲ್ಲು. (ಪುನಃ ಹುಡುಕಿ ಚೇಟನನ್ನು ಹಿಡಿದು) ಎಲೋ, ಸಿಕ್ಕಿದಳು.

ಚೇಟ—ಅಯ್ಯಾ, ನಾನು ಚೇಟ.

ಶಕಾರ—ಓಹೋ ! ಚೇಟನೆ ? (ಇನ್ನೊಂದುಕಡೆ ನಿಲ್ಲಿಸಿ) ಇಲ್ಲಿ ಭಾವ, ಅಲ್ಲಿ ಚೇಟ. ಭಾವ-ಚೇಟ, ಚೇಟ-ಭಾವ, ನೀವಿಬ್ಬರೂ ಹೀಗಿರಿ. (ಪುನಃ ಹುಡುಕಿ ರದನಿಕೆಯನ್ನು ಹಿಡಿದು) ಎಲೋ, ಭಾವ, ವಸಂತ ಸೇನೆ ಸಿಕ್ಕಿದಳು. ಕತ್ತಲೆಯಲ್ಲಿ ಓಡಿಹೋಗುತ್ತಿದ್ದಳು. ಚಾಣಕ್ಯನು ದ್ರೌಪದಿಯ ಮುಂದಲೆಯನ್ನು ಹಿಡಿದುಕೊಂಡಂತೆ ಹಿಡಿದಿರುವೆನು.

ರದನಿಕೆ—ಅಯ್ಯಾ, ನನ್ನನ್ನೇಕೆ ಹಿಡಿದುಕೊಂಡಿರಿ ?

ವಿಟ—ಎಲೋ, ಇದು ವಸಂತಸೇನೆಯ ಧ್ವನಿಯಲ್ಲ. ಬೇರೆಯಾಗಿ ಕಾಣುತ್ತದೆ.

ಶಕಾರ—ಎಲೋ, ಭಾವ, ಕೆನೆಮೊಸರನ್ನು ಕುಡಿಯಲು ಯತ್ನಿಸಿದ ಹೆಣ್ಣುಬೆಕ್ಕಿನಂತೆ ವಸಂತಸೇನೆಯು ತನ್ನ ಧ್ವನಿಯನ್ನೇ ಮಾರ್ಪಡಿಸಿಕೊಂಡಿರುವಳು.

ವಿಟ—ಧ್ವನಿಯನ್ನು ಹೇಗೆ ಮಾರ್ಪಡಿಸಿಕೊಂಡಳು ! ಆಶ್ಚರ್ಯ ! ಅಥವಾ ಆಶ್ಚರ್ಯವೇನು ? ಅನೇಕ ವಿದ್ಯೆಗಳನ್ನು ಅಭ್ಯಾಸಮಾಡಿ ರಂಗಸ್ಥಳಕ್ಕೆ ಹೋದುದರಿಂದ ವಂಚನೆಯನ್ನು ಚೆನ್ನಾಗಿ ಕಲಿತೇ ಇರಬಹುದು. ಇಂತಹಳು ಧ್ವನಿಯನ್ನು ಮಾರ್ಪಡಿಸಿಕೊಂಡುದೊಂದು ದೊಡ್ಡದೇ ?

ವಿದೂಷಕ—(ದೀಪವನ್ನು ಹಿಡಿದುಕೊಂಡು ಬಂದು) ಓಹೋ ! ಏನಿದು ? ಮಂದೆಯಿಂದ ತಪ್ಪಿಸಿಕೊಂಡು ಬಂದ ಆಡಿನ ಹೃದಯದಂತೆ ಗಾಳಿಯಿಂದ ದೀಪವು ಪುರುಪುರುಗುಟ್ಟುತ್ತಿರುವುದು. (ರದನಿಕೆಯನ್ನು ಕಂಡು) ಎಲೆ ರದನಿಕೆ, ಆರ್ಯ ಚಾರುದತ್ತನು ದರಿದ್ರನಾದನೆಂದು ಹೀಗೆ ಪರಪುರುಷರನ್ನು ಮನೆಗೆ ಪ್ರವೇಶಮಾಡಿಸುವುದು ನಿನಗೆ ಯುಕ್ತವಲ್ಲ.

ರದನಿಕೆ—ಆರ್ಯಮೈತ್ರೇಯನೆ, ನೋಡು. ನನಗೆ ಅಪಮಾನ ಮಾಡುವರು.

ವಿದೂಷಕ—ನಿನಗೆ ಅಪಮಾನವೋ ? ನಮಗೊ ?

ರದನಿಕೆ—ನಿಮಗೇ ಅಪಮಾನ.

ವಿದೂಷಕ—ನಮಗೇ ? ಆದರೇನು ? ಬಲಾತ್ಕಾರವೊ ?

ಚೇಟ — ಭಟ್ಟಾರಕ, ಚೇಟಿಕೇಯಂ।

ಶಕಾರ — ಇತೋ ಭಾವ:, ಇತಶ್ಚೇಟ: । ಭಾವಶ್ಚೇಟ:, ಚೇಟೋ ಭಾವ: ।
ಯುವಾಂ ತಾವದೇಕಾಂತೇ ತಿಷ್ಠತಾಂ । (ಪುನ: ರದನಿಕಾಂ
ಕೇಶೇಷು ಗೃಹೀತ್ವಾ) ಭಾವ ಭಾವ ಸಾಂಪ್ರತಂ ಗೃಹೀತಾ
ವಸಂತಸೇನಾ ।

ಅಂಧಕಾರೇ ಪಲಾಯಮಾನಾ ಮಾಲ್ಯಗಂಧೇನ ಸೂಚಿತಾ ।
ಕೇಶವೃಂದೇ ಪರಾಮೃಷ್ಟಾ ಚಾಣಕ್ಯೇನೇವ ದ್ರೌಪದೀ ॥

ವಿಟ:— ಏಷಾಸಿ ವಯಸೋ ದರ್ಪಾತ್ ಕುಲಪುತ್ರಾನುಸಾರಿಣೀ ।
ಕೇಶೇಷು ಕುಸುಮಾಢ್ಯೇಷು ಸೇವಿತವ್ಯೇಷು ಕರ್ಷಿತಾ ॥4

ಶಕಾರ — ಏಷಾಸಿ ವಾಸು ಶಿರಸಿ ಗೃಹೀತಾ ಕೇಶೇಷು ಬಾಲೇಷು ಶಿರೋರುಹೇಷು ।
(ಏಶಾಶಿ ವಾಶೂ ಶಿಲಶಿ ಗಹಿದಾ ಕೇಶೇಶು ವಾಲೇಶು ಶಿಲೋಲುಹೇಶು
ಆಕ್ರೋಶ ವಿಕ್ರೋಶ ಲಪಾಧಿ ಚಂಡಂ ಶಂಭುಂ ಶಿವಂ ಶಂಕರಮೀಶ್ವರಂ ವಾ ।
(ಅಕ್ಕೋಶ ವಿಕ್ಕೋಶ ಲವಾಹಿ ಚಂಡಂ ಶಂಭುಂ ಶಿವಂ ಶಂಕಲಮೀಶ್ಶಲಂ ವಾ

ರದನಿಕಾ — (ಸಭಯಂ) ಕಿಮಾರ್ಯಮಿಶ್ರೈರ್ವ್ಯವಸಿತಂ

ವಿಟ — ಕಾಣೇಲೀಮಾತ:, ಅನ್ಯ ಏವೈಷ ಸ್ವರಸಂಯೋಗ:

ಶಕಾರ — ಭಾವ ಭಾವ, ಯಥಾ ದಧಿಸರಪಲುಬ್ಧಾಯಾ ಮಾರ್ಜಾರಿಕಾಯಾ:
ಸ್ವರಪರಿವೃತ್ತಿರ್ಭವತಿ, ತಥಾ ದಾಸ್ಯಾ:ಪುತ್ರ್ಯಾ ಸ್ವರಪರಿವೃತ್ತಿ: ಕೃತಾ:

ವಿಟ — ಕಥಂ ಸ್ವರಪರಿವರ್ತ: ಕೃತ: । ಅಹೋ ಚಿತ್ರಂ । ಅಥವಾ ಕಿಮತ್ರ ಚಿತ್ರ

ಇಯಂ ರಂಗಪ್ರವೇಶೇನ ಕಲಾನಾಂ ಚೋಪಶಿಕ್ಷಯಾ ।
ವಂಚನಾಪಂಡಿತತ್ವೇನ ಸ್ವರನೈಪುಣ್ಯಮಾಶ್ರಿತಾ ॥

(ಪ್ರವಿಶ್ಯ)

ವಿದೂಷಕ — ಹೀ ಹೀ ಭೋ:, ಪ್ರದೋಷಮಂದಮಾರುತೇನ ಪಶುಬಂಧೋಪ
ನೀತಸ್ಯೇವ ಛಾಗಲಸ್ಯ ಹೃದಯಂ ಫುರಫುರಾಯತೇ ಪ್ರದೀಪ: ।
(ಉಪಸೃತ್ಯ ರದನಿಕಾಂ ದೃಷ್ಟ್ವಾ) ಭೋ ರದನಿಕೇ

ಶಕಾರ:— ಭಾವ ಭಾವ, ಮನುಷ್ಯೋ ಮನುಷ್ಯ: !

ವಿದೂಷಕ:— ಯುಕ್ತಂ ನೇದಂ । ಸದೃಶಂ ನೇದಂ । ಯದಾರ್ಯಚಾರುದತ್ತಸ್ಯ
ದರಿದ್ರತಯಾ ಸಾಂಪ್ರತಂ ಪರಪುರುಷಾ ಗೇಹಂ ಪ್ರವಿಶಂತಿ ।

ರದನಿಕಾ — ಆರ್ಯ ಮೈತ್ರೇಯ ಪ್ರೇಕ್ಷಸ್ವ ಮೇ ಪರಿಭವಂ ।

ವಿದೂಷಕ — ಕಿಂ ತವ ಪರಿಭವೋ ಅಥವಾ ಅಸ್ಮಾಕಂ ?

ರದನಿಕಾ — ನನು ಯುಷ್ಮಾಕಮೇವ

ವಿದೂಷಕ — ಕಿಮೇಷ ಬಲಾತ್ಕಾರ: ?

ರದನಿಕಾ — ಅಥ ಕಿಂ ?

ರದನಿಕಾ — ಅಥ ಕಿಂ!?
ವಿದೂಷಕ — ಸತ್ಯಂ?
ರದನಿಕಾ — ಸತ್ಯಂ!
ವಿದೂಷಕಃ — (ಸಕ್ರೋಧಂ ದಂಡಕಾಷ್ಠಮುದ್ಯಮ್ಯ) ಮಾ ತಾವತ್।
ಭೋಃ, ಸ್ವೇ ಸ್ವೇ ಗೇಹೇ ಕುಕ್ಕುರೋಽಪಿ ತಾವಚ್ಚಂಡೋ ಭವತಿ, ಕಿಂ ಪುನರಹಂ ಬ್ರಾಹ್ಮಣಃ?! ತದನೇನಾಸ್ಮಾದೃಶಜನಭಾಗಧೇಯಕುಟಿಲೇನ ದಂಡಕಾಷ್ಠೇನ ದುಷ್ಟಸ್ಯೇವ ಶುಷ್ಕವೇಣುಕಸ್ಯ ಮಸ್ತಕಂ ತೇ ಪ್ರಹಾರೈಃ ಕುಟ್ಟಯಿಷ್ಯಾಮಿ। (ದುಷ್ಟಸ್ಯ ಅನಪರಾಧ್ಯೋಽಪಿ ನಿಗ್ರಹಂ ಪ್ರಾಪ್ತೋಽಸ್ಯೇವೇತ್ಯರ್ಥಃ। ಶುಷ್ಕವಂಶ ಪ್ರಹಾರೇಣ। ಶುಷ್ಕೋ ಅತಿದೀರ್ಘಸ್ಯ ಪ್ರತಿಪಾದನಾಯ ವಂಶಸ್ಯ ಶಿರಃ ಕುಟ್ಯತೇ) ತಥಾ ತವ ಶಿರಃ ಕುಟ್ಟಯಿಷ್ಯಾಮಿ।
ವಿಟಃ — ಮಹಾಬ್ರಾಹ್ಮಣ, ಮರ್ಷಯ ಮರ್ಷಯ।
ವಿದೂಷಕ — (ವಿಟಂ ದೃಷ್ಟ್ವಾ) ನಾತ್ರ ಏಷೋಽಪರಾಧ್ಯತಿ (ಶಕಾರಂ ದೃಷ್ಟ್ವಾ) ಏಷ ಖಲ್ವತ್ರಾಪರಾಧ್ಯತಿ। ಅರೇ ರೇ ರಾಜಶ್ಯಾಲಕ ಸಂಸ್ಥಾನಕ ದುರ್ಜನ ದುರ್ಮನುಷ್ಯ, ಯುಕ್ತಂ ನೇದಂ। ಯದ್ಯಪಿ ನಾಮ ತತ್ರಭವಾನಾರ್ಯಚಾರುದತ್ತೋ ದರಿದ್ರಃ ಸಂವೃತ್ತಃ। ತತ್ಕಿಂ ತಸ್ಯ ಗುಣೈರ್ನಾಲಂಕೃತೋಜ್ಜಯಿನೀ? ಯೇನ ತಸ್ಯ ಗೃಹಂ ಪ್ರವಿಶ್ಯ ಪರಿಜನಸ್ಯೇದೃಶ ಉಪಮರ್ದಃ ಕ್ರಿಯತೇ?

ಗಾಥಾ ‖ ಮಾ ದುರ್ಗತ ಇತಿ ಪರಿಭವೋ ನಾಸ್ತಿ ಕೃತಾಂತಸ್ಯ ದುರ್ಗತೋ ನಾಮ।
ಚಾರಿತ್ರೇಣ ವಿಹೀನ ಆಢ್ಯೋಽಪಿ ಚ ದುರ್ಗತೋ ಭವತಿ॥
(ದುರ್ಗತಃ = ದರಿದ್ರಃ)

ವಿಟ — (ಸವೈಲಕ್ಷ್ಯಂ) ಮಹಾಬ್ರಾಹ್ಮಣ, ಮರ್ಷಯ, ಮರ್ಷಯ। ಅನ್ಯಜನಶಂಕಯಾ ಖಲ್ವಿದಮನುಷ್ಠಿತಂ, ನ ದರ್ಪಾತ್। ಪಶ್ಯ।

ಸಕಾಮಾನ್ವಿಷ್ಯತೇಽಸ್ಮಾಭಿಃ —

ವಿದೂಷಕ :— ಕಿಮಿಯಂ?
ವಿಟಃ — ಶಾಂತಂ ಪಾಪಂ।

— ಕಾಚಿತ್ಸ್ವಾಧೀನಯೌವನಾ।
ಸಾ ನಷ್ಟಾ ಶಂಕಯಾ ತಸ್ಯಾಃ ಪ್ರಾಪ್ತೇಯಂ ಶೀಲವಂಚನಾ॥

ಸರ್ವಥಾ ಇದಮನುನಯಸರ್ವಸ್ವಂ ಗೃಹ್ಯತಾಂ (ಇತಿ ಖಡ್ಗಮುತ್ಸೃಜ್ಯ ಕೃತಾಂಜಲಿಃ ಪಾದಯೋಃ ಪತತಿ)

ವಿದೂಷಕ — ಸತ್ಪುರುಷ ಉತ್ತಿಷ್ಠೋತ್ತಿಷ್ಠ। ಅಜಾನತಾ ಮಯಾ ತ್ವಮುಪಾಲಬ್ಧಃ। ಸಾಂಪ್ರತಂ ಪುನರ್ಜಾನನ್ನನುನಯಾಮಿ।
ವಿಟ — ನನು ಭವಾನೇವಾತ್ರಾನುನೇಯಃ। ತದುತ್ತಿಷ್ಠಾಮಿ ಸಮಯ

ರದನಿಕೆ—ಅಹುದು.

ವಿದೂಷಕ—ನಿಶ್ಚಯವೊ ?

ರದನಿಕೆ—ನಿಶ್ಚಯ.

ವಿದೂಷಕ—(ಕೋಪದಿಂದ ಕಟ್ಟಿಗೆಯನ್ನು ಮೇಲಕ್ಕೆತ್ತಿ) ತನ್ನ ಮನೆಯಲ್ಲಿದ್ದಾಗ ನಾಯಿಯೂ ಕೋಪಮಾಡುವುದು. ನಾನು ಬ್ರಾಹ್ಮಣ, ಹೇಳತಕ್ಕುದೇನು ? ಇದೊ ನೋಡು, ನಮ್ಮ ಅದೃಷ್ಟದಂತೆ ವಕ್ರವಾದ ಈ ದಂಡಕಾಷ್ಟದಿಂದ ನಿನ್ನ ತಲೆಯನ್ನೊಡೆದು ಹಾಕುವೆನು.

ವಿಟ—ಅಯ್ಯಾ, ಮಹಾಬ್ರಾಹ್ಮಣನೆ, ಕ್ಷಮಿಸು ಕ್ಷಮಿಸು.

ವಿದೂಷಕ—(ವಿಟನನ್ನು ನೋಡಿ) ಈತನು ನಮಗೆ ಅಪರಾಧ ಮಾಡಿದವನಲ್ಲ. (ಶಕಾರನನ್ನು ನೋಡಿ) ಇವನೇ ಇದನ್ನು ಮಾಡಿದುದು. ಎಲೋ ರಾಜಶಾಲಕ, ಸಂಸ್ಥಾನಿಕ, ದುರ್ಜನ, ದುರಾಚಾರ, ದುರ್ಮನುಷ್ಯ, ಇದು ನಿನಗೆ ಯುಕ್ತವಲ್ಲ. ಆರ್ಯ ಚಾರುದತ್ತನು ದರಿದ್ರನಾದ ಮಾತ್ರಕ್ಕೆ ತನ್ನ ಗುಣಗಳಿಂದ ಈ ಉಜ್ಜಯಿನೀಪಟ್ಟಣವನ್ನು ಅಲಂಕರಿಸುವುದಿಲ್ಲವೆ? ನೀನು ಅವನ ಮನೆಗೆ ನುಗ್ಗಿ ಅವನ ಸೇವಕರನ್ನು ಅಪಮಾನ ಪಡಿಸಬಹುದೇ ?

ವಿಟ—ಮಹಾಬ್ರಾಹ್ಮಣನೆ, ಕ್ಷಮಿಸು ಕ್ಷಮಿಸು. ಯಾರೋ ಇತರರೆಂದು ಭ್ರಮಿಸಿ ಹೀಗೆ ಮಾಡಿದೆವು. ಅಹಂಕಾರದಿಂದ ಮಾಡಲಿಲ್ಲ. ನಮ್ಮಲ್ಲನುರಕ್ತೆಯಾದವಳನ್ನು ಹುಡುಕುತ್ತಿದ್ದೆವು.

ವಿದೂಷಕ—ಏನು, ಇವಳೇಯೋ ?

ವಿಟ—ಶಿವಶಿವ ! ಇವಳಲ್ಲ. ಮತ್ತೊಬ್ಬ ಯುವತಿ. ಅವಳೆಲ್ಲೊ ತಪ್ಪಿಸಿಕೊಂಡಳು. ಅವಳೇ ಆಗಿರಬಹುದೆಂದು ಇವಳನ್ನು ಹಿಡಿದುಕೊಂಡೆವು. ನಮ್ಮಿಂದ ಅಪರಾಧವಾಯಿತು. ಕ್ಷಮಿಸಬೇಕು. (ಕತ್ತಿಯನ್ನು ಕೆಳಗಿಟ್ಟು ಕಾಲಮೇಲೆ ಬೀಳುವನು.)

ವಿದೂಷಕ—ಅಯ್ಯಾ, ಏಳು, ನಾನು ತಿಳಿಯದೆ ನಿನ್ನನ್ನು ನಿಂದಿಸಿದೆನು.

ವಿಟ—ಈ ವೃತ್ತಾಂತವನ್ನು ಆರ್ಯ ಚಾರುದತ್ತನಿಗೆ ನೀನು ದಯವಿಟ್ಟು ತಿಳಿಸದೆ ಇರಬೇಕೆಂದು ಬೇಡುತ್ತೇನೆ.

ವಿದೂಷಕ—ತಿಳಿಸುವುದಿಲ್ಲ.

ಶಕಾರ—(ಅಸೂಯೆಯಿಂದ) ಭಾವ, ದುಷ್ಟನಾದ ಈ ಹುಡುಗನ ಕಾಲುಗಳಿಗೆ ಬಿದ್ದು ಏಕೆ ಬೇಡಿಕೊಂಡೆ?

ವಿಟ—ಭಯಪಟ್ಟು.

ಶಕಾರ—ಯಾರಿಗೆ ?

ವಿಟ—ಆ ಚಾರುದತ್ತನ ಗುಣಗಳಿಗೆ.

ಶಕಾರ—ಅವನ ಗುಣಗಳೇನು ? ಮನೆಗೆ ಹೋದರೆ ಹಿಟ್ಟಿಗೆ ಗತಿಯಿಲ್ಲ.

ವಿಟ—ಹಾಗೆನ್ನಬೇಡ. ಆತನು ತನ್ನ ಉಚ್ಛ್ರಾಯಕಾಲದಲ್ಲಿ ಯಾರಿಗೂ ಅಪಮಾನವಮಾಡಿದವನಲ್ಲ. ಬಿಸಿಲುಕಾಲದಲ್ಲಿ ಸರೋವರವು ತನ್ನ ಜಲದಿಂದ ಎಲ್ಲರಿಗೂ ದಾಹಶಾಂತಿಮಾಡಿ ಶುಷ್ಕವಾಗುವಂತೆ ತನ್ನ ಐಶ್ವರ್ಯವನ್ನೆಲ್ಲ ನಮ್ಮಂತಹವರಿಗೆ ವ್ಯಯಮಾಡಿ ದರಿದ್ರನಾದನು.

ಶಕಾರ—ಅವನಾವನೋ ಆ ತೊತ್ತಿನಮಗ, ಪಾಂಡುಪುತ್ರನಾದ ಶ್ವೇತಕೇತುವೊ ? ಇಂದ್ರನಿಂದ ರಾಧೆಯ ಹೊಟ್ಟೆಯಲ್ಲಿ ಜನಿಸಿದ ರಾವಣಾಸುರನೊ ? ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದ ಅಶ್ವತ್ಥಾಮನೊ ? ಅಥವಾ ಯಮನ ಮಗನಾದ ಜಟಾಯುವೊ ?

ವಿಟ—ಮೂರ್ಖನೆ, ಅವನು ಯಾರೂ ಅಲ್ಲ. ಸಕಲಗುಣಸಂಪನ್ನನಾದ ಆರ್ಯ ಚಾರುದತ್ತ. ಆದುದರಿಂದ ನಾವಿನ್ನು ಹೊರಟು ಹೋಗೋಣ, ನಡೆ.

ಶಕಾರ—ವಸಂತಸೇನೆಯನ್ನು ಕರೆದುಕೊಳ್ಳದೆಯೇ ಹೋಗುವುದೇ ?

ವಿಟ—ವಸಂತಸೇನೆಯು ಹೋದಳು.

ಶಕಾರ—ಹೇಗೆ ಹೋದಳು ?

ವಿಟ—

ಕಂದ ॥ ಕುರುಡನ ಕಣ್ಗಳವೋಲಾ !
ತುರನ ತನೂಪುಷ್ಟಿಯಂತೆ ಮೂರ್ಖನ ಮತಿವೋಲ್ ॥
ಪರಮವ್ಯಸನಿಯ ವಿದ್ಯವೊ !
ಲರದೈದಿದಳುಳಿದು ನಿನ್ನನಾಸುಂದರಿ ತಾಂ॥

ವಿದೂಷಕ — ಭವತು ಭವಾನ್

ವಿಟ — ಇಮಮಿದಾನೀಂ ವೃತ್ತಾಂತಮಾರ್ಯ ಚಾರುದತ್ತಸ್ಯ ನಾಖ್ಯಾಸ್ಯಸಿ।

ವಿದೂಷಕ — ನ ಕಥಯಿಷ್ಯಾಮಿ।

ವಿಟ:— ಯಷ್ಟಿಸ್ತೇ ಪ್ರಣಯೋಽಪ್ಯತ್ರ ಶರಣಾ ಧಾರ್ಯತೇ ಮಯಾ।
ಗುಣಶಸ್ತ್ರೈರ್ವಯಂ ಯೇನ ಶಸ್ತ್ರವಂತೋಽಪಿ ನಿರ್ಜಿತಾಃ॥

ಶಕಾರ:—(ಸಾಸೂಯಂ) ಕಿಂ ಸೋಽಯಂ ಪುನರ್ಭಾವ ಯತಸ್ಯ ದುಷ್ಟಬಟು-
ಕಸ್ಯ ಕೃಪಣಾಂಜಲಿಂ ಕೃತ್ವಾ ಪಾದಯೋರ್ನಿಪತಸಿ।

ವಿಟ:— ಭೀತೋಽಸ್ಮಿ

ಶಕಾರ:— ಕಸ್ಮಾತ್ತ್ವಂ ಭೀತಃ?

ವಿಟ:— ತಸ್ಯ ಚಾರುದತ್ತಸ್ಯ ಗುಣೇಭ್ಯಃ

ಶಕಾರ:— ಕೇ ತಸ್ಯ ಗುಣಾಃ ಯಸ್ಯ ಗೃಹಂ ಪ್ರವಿಶ್ಯ ಖಾದಿತವ್ಯಮಪಿ ನಾಸ್ತಿ?!

ವಿಟ — ಮಾಮೈವಂ।

ಸೋಽಸ್ಮದ್ವಿಧಾನಾಂ ಪ್ರಣಯೈಃ ಕೃಶೀಕೃತೋ ನ ತೇನ ಕಶ್ಚಿತ್ ವಿಭವೈರ್ವಿಮಾನಿತಃ।
ನಿದಾಘಕಾಲೇಷ್ವಿವ ಸೋದಕೋ ಹ್ರದೋ ನೃಣಾಂ ಸ ತೃಷ್ಣಾಮಪನೀಯ ಶುಷ್ಕವಾನ್॥

ಶಕಾರ — (ಸಾಮರ್ಷಂ) ಕಃ ಸ ಗರ್ಭದಾಸ್ಯಾಃ ಪುತ್ರಃ?

ಶೂರೋ ವಿಕ್ರಾಂತಃ ಪಾಂಡವಃ ಶ್ವೇತಕೇತುಃ ಪುತ್ರೋ ರಾಧಾಯಾ ರಾವಣ ಇಂದ್ರದತ್ತಃ।
ಆಹೋ ಕುಂತ್ಯಾ ತೇನ ರಾಮೇಣ ಜಾತಃ ಅಶ್ವತ್ಥಾಮಾ ಧರ್ಮಪುತ್ರೋ ಜಟಾಯುಃ॥

(ವ್ಯರ್ಥಂ ವಿರುದ್ಧಾರ್ಥಂ। ಶ್ವೇತಕೇತುರುದ್ದಾಲಕಿಃ ದುರ್ವಾಸಸೋ
ಮಾತುಲಃ ಋಷಿವಿಶೇಷಃ। ಇಂದ್ರದತ್ತೋ ಬೃಹತ್ಕಥಾಯಾಂ ಲಂಬಕೇ
ಸ್ತ್ರೀಯಂಶೇ ಸಂಸ್ಥಿತಃ)

ವಿಟ:— ಮೂರ್ಖ, ಆರ್ಯ ಚಾರುದತ್ತಃ ಖಲ್ವಸೌ।

ದೀನಾನಾಂ ಕಲ್ಪವೃಕ್ಷಃ ಸ್ವಗುಣಫಲನತಃ ಸಜ್ಜನಾನಾಂ ಕುಟುಂಬೀ
ಆದರ್ಶಃ ಶಿಕ್ಷಿತಾನಾಂ ಸುಚರಿತನಿಕಷಃ ಶೀಲವೇಲಾಸಮುದ್ರಃ।
ಸತ್ಕರ್ತಾ ನಾವಮಂತಾ ಪುರುಷಗುಣನಿಧಿರ್ದಕ್ಷಿಣೋದಾರಸತ್ತ್ವೋ
ಹ್ಯೇಕಃ ಶ್ಲಾಘ್ಯಃ ಸ ಜೀವತ್ಯಧಿಕಗುಣತಯಾ ಚೋಚ್ಛ್ವಸಂತೀವ ಚಾನ್ಯೇ॥

ತದಿತೋ ಗಚ್ಛಾಮಃ।

ಶಕಾರ — ಅಗೃಹೀತ್ವಾ ವಸಂತಸೇನಾಂ?

ವಿಟ — ನಷ್ಟಾ ವಸಂತಸೇನಾ

ಶಕಾರ — ಕಥಮಿವ?

ವಿಟ —

ಅಂಧಸ್ಯ ದೃಷ್ಟಿರಿವ ಪುಷ್ಟಿರಿವಾತುರಸ್ಯ ಮೂರ್ಖಸ್ಯ ಬುದ್ಧಿರಿವ ಸಿದ್ಧಿರಿವಾಲಸಸ್ಯ।
ಸ್ವಲ್ಪಸ್ಮೃತೇರ್ವ್ಯಸನಿನಃ ಪರಮೇವ ವಿದ್ಯಾ ತ್ವಾಂ ಪ್ರಾಪ್ಯ ಸಾ ರತಿರಿವಾರಿಜನೇ ಪ್ರನಷ್ಟಾ॥

ಶಕಾರ- ಅಗೃಹೀತ್ವಾ ವಸಂತಸೇನಾಂ ನ ಗಮಿಷ್ಯಾಮಿ।
ವಿಟಃ— ಏತದಪಿ ನ ಶ್ರುತಂ ಶ್ರೂಯತಾಂ
ಆಲಾನೇ ಗೃಹ್ಯತೇ ಹಸ್ತೀ ವಾಜೀ ವಲ್ಗಾಸು ಗೃಹ್ಯತೇ।
ಹೃದಯೇ ಗೃಹ್ಯತೇ ನಾರೀ ಯದಿದಂ ನಾಸ್ತಿ ಗಮ್ಯತಾಂ॥
ಶಕಾರ— ಯದಿ ಗಚ್ಛಸಿ ಗಚ್ಛ ತ್ವಂ। ಅಹಂ ನ ಗಮಿಷ್ಯಾಮಿ।

ವಿಟಃ— ಏವಂ। ಗಚ್ಛಾಮಿ। (ಇತಿ ನಿಷ್ಕ್ರಾಂತಃ)

ಶಕಾರ— ಗತಃ ಖಲು ಭಾವೋಽಭಾವಂ।
(ವಿದೂಷಕಮುದ್ದಿಶ್ಯ) ಅರೇ
ಕಾಕಪದಶೀರ್ಷಮಸ್ತಕ ದುಷ್ಟಬಟುಕ
ಉಪವಿಶೋಪವಿಶ। (ಕಾಕಪದ ಶೀರ್ಷಮಸ್ತಕ ಇತಿ।
ದ್ವ್ಯಂತರದ್ವ್ಯಂತರಾಯಾಃ ಪ್ರವೃತ್ತಾ ಕಾಕಪದಾಕಾರಾ ಯೇ ಧಾತಾಸ್ತೇಷಾಂ ಶೀರ್ಷ
ಪ್ರಾಯಾ ಗ್ರಾಮ್ಯಾಸ್ತೇಷಾಂ ಮಸ್ತಕ ಭಾಗೇ ಧಾತೋಃ ಚಕ್ರವರ್ತಿನಾಮಪಿ
ಪ್ರಧಾನ ಭಾಗೇ। ಏತೇನಾಚಾರಲಕ್ಷಣ ಚಿಹ್ನಃ ಕೃತಃ। ಕೇಚಿತ್ತು—
ಕಾಕಪದಶೀರ್ಷಂ ಕಾಕಪದವತ್ ಸಂಹತಾ ಶೀರ್ಷಂ ಮಸ್ತಕಂ ಯಸ್ಯ।
ಸಂಹೀತಾಮಲಕ್ಷಣಂ। ಅಷ್ಟಕಪಾಲಃ। ಕೇನಾಲಕ್ಷಣಾರ್ಥಕ ಮಸ್ತಕ
ಇತ್ಯರ್ಥಃ- ಇತ್ಯಾಹುಃ। ಅತ್ರ ಚ ಮಾತ್ರೇ ಶೀರ್ಷಮಸ್ತಕ ಇತಿ
ಶಕಾರ ವಾಕ್ಯತ್ವೇನ ಪುನರುಕ್ತತ್ವಂ ನ ದೋಷಃ)

ವಿದೂಷಕ— ಉಪವೇಶಿತಾ ವಯ ವಯಂ।
ಶಕಾರ— ಕೇನ
ವಿದೂಷಕ— ಕೃತಾಂತೇನ
ಶಕಾರ:— ಉತ್ತಿಷ್ಠೋತ್ತಿಷ್ಠ
ವಿದೂಷಕ— ಉತ್ತಿಷ್ಠಾಮಃ
ಶಕಾರ:— ಕದಾ
ವಿದೂಷಕ— ಯದಾ ಪುನರಪಿ ದೈವಮನುಕೂಲಂ ಭವಿಷ್ಯತಿ।
ಶಕಾರ— ಅರೇ ರುದಿಹಿ ರುದಿಹಿ
ವಿದೂಷಕ:— ರೋದಿತಾ ವಯ ವಯಂ
ಶಕಾರ— ಕೇನ
ವಿದೂಷಕ— ದುರ್ಗತ್ಯಾ
ಶಕಾರ— ಅರೇ ಹಸ ಹಸ
ವಿದೂಷಕ— ಹಸಿಷ್ಯಾಮಃ
ಶಕಾರ— ಕದಾ
ವಿದೂಷಕ— ಪುನರಪಿ ಸಮೃದ್ಧ್ಯಾರ್ಯ ಚಾರುದತ್ತಸ್ಯ।
ಶಕಾರ— (ಅಲೆ) ಅರೇ ದುಷ್ಟಬಟುಕ ಭಣೇಃ ತಸ್ಯ ದರಿದ್ರ ಚಾರುದತ್ತಸ್ಯ ವಚನೇನ
ತಂ ಸುವರ್ಣ ಚಾರುದತ್ತಕಂ— "ಏಷಾ ಸಸುವರ್ಣಾ

ಶಕಾರ–ವಸಂತಸೇನೆಯನ್ನು ಕರೆದುಕೊಳ್ಳದೆ ನಾನು ಬರುವುದಿಲ್ಲ.

ವಿಟ—

ಶ್ಲೋಕ॥ ಅಲಾನೇಗೃಹ್ಯತೇ। ಹಸ್ತೀ ವಾಜೀವಲ್ಗಾಸು ಗೃಹ್ಯತೆ।
ಹೃದಯೇ ಗೃಹ್ಯತೇ ನಾರೀ॥

ಎಂಬ ನೀತಿಯಂತೆ ಮನಸ್ಸಿಲ್ಲದ ಸ್ತ್ರೀಯನ್ನು ಕಟ್ಟಿಕೊಂಡೇನು ?

ಶಕಾರ–ನೀನು ಹೋಗುವುದಾದರೆ ಹೋಗು. ನಾನು ಬರುವುದಿಲ್ಲ.

ವಿಟ–ಆದರೆ ಹೋಗುವೆನು (ಹೋಗುವನು.)

ಶಕಾರ –ಭಾವ ಹಾಳಾಗಿಯೇ ಹೋದ (ವಿದೂಷಕನ ಸಮೀಪಕ್ಕೆ ಬಂದು) ಎಲೋ, ಹುಡುಗ, ದುಷ್ಟ, ಕುಳಿತುಕೊ.

ವಿದೂಷಕ–ಕುಳ್ಳಿರಿಸಿಯೇ ಇದ್ದಾನೆ.

ಶಕಾರ–ಯಾರು ?

ವಿದೂಷಕ–ಯಮ.

ಶಕಾರ—ಹಾಗಾದರೆ ಏಳುಏಳು.

ವಿದೂಷಕ–ಏಳುವೆನು.

ಶಕಾರ–ಯಾವಾಗ ?

ವಿದೂಷಕ–ಪುನಃ ದೈವವು ಅನುಕೂಲಿಸಿದಾಗ.

ಶಕಾರ–ಆದರೆ ಅಳು ಅಳು.

ವಿದೂಷಕ– ಅಳಿಸುತ್ತಲೇ ಇದೆ.

ಶಕಾರ–ಯಾವುದು ?

ವಿದೂಷಕ–ಬಡತನ.

ಶಕಾರ–ಎಲೋ, ನಗುನಗು.

ವಿದೂಷಕ–ನಗುವೆನು.

ಶಕಾರ–ಯಾವಾಗ ?

ವಿದೂಷಕ–ತಿರುಗಿ ನಮ್ಮ ಚಾರುದತ್ತನಿಗೆ ಐಶ್ವರ್ಯ ಬಂದಾಗ.

ಶಕಾರ–ಎಲಎಲ ತಲೆಹೋಕ! ಇರಲಿ, ಅವನಿಗೆ ತಿಳಿಸು.— ವಸಂತಸೇನೆಯೆಂಬ ಸೂಳೆಯರ ಹುಡುಗಿಯು ಚಿನ್ನದ ಒಡವೆಗಳನ್ನು

ಧರಿಸಿಕೊಂಡು ಕಾಮದೇವಾಯತನೋದ್ಯಾನದಿಂದ ನಿನ್ನಲ್ಲೇ ಅನುರಕ್ತೆಯಾಗಿ ನಾನು ಅನುಸರಿಸಿ ಬಂದರೂ ಲಕ್ಷ್ಯವಿಡದೆ ಬಂದಿರುವಳು. ಅವಳನ್ನು ನೀನು ಕರೆದುಕೊಂಡು ಬಂದು ನನಗೊಪ್ಪಿಸಿದರೆ ನ್ಯಾಯಾಸ್ಥಾನದಲ್ಲಿ ವ್ಯವಹಾರವಿಲ್ಲದೆ ನನಗೂ ನಿನಗೂ ನಡತೆ ಸರಿಯಾಗಿದ್ದೀತು. ಇಲ್ಲವಾದರೆ ಕುಂಬಳಕಾಯು ತೊಟ್ಟಿಗೆ ಸೆಗಣಿ ಸವರಿದ್ದರೆ ಆ ಕುಂಬಳಕಾಯಿ ಹೇಗೆ ಕೆಟ್ಟು ಹೋಗುವುದಿಲ್ಲವೋ ಹಾಗೆ ಎಷ್ಟು ದಿನವಾದರೂ ನಿನಗೂ ನನಗೂ ವೈರಹೋಗುವುದಿಲ್ಲ—ಎಂದು ಆ ದರಿದ್ರ ಚಾರುದತ್ತನಿಗೆ ನಾನು ಹೇಳಿದೆನೆಂಬುದಾಗಿ ಹೇಳು, ಚೆನ್ನಾಗಿ ಹೇಳು. ' ನಮ್ಮ ಮನೆಯು ಕಪೋತದಮೇಲೆ ಕುಳಿತಿದ್ದರೆ ಅಲ್ಲಿಗೂ ಕೇಳಿಸುವಂತೆ ಹೇಳು, ಎಚ್ಚರಿಕೆ! ಇಲ್ಲದಿದ್ದರೆ ಕದದ ಅಡಿಗೆ ಸಿಕ್ಕಿದ ಬೇಲದಬುರುಡೆಯಂತೆ ನಿನ್ನ ತಲೆಯನ್ನು ಒಂದೇ ಏಟಿಗೆ ಪುಡಿಪುಡಿ ಮಾಡುವೆನು.

ವಿದೂಷಕ–ಅಯ್ಯಾ! ನೀನು ಕೈಯ್ಯಲ್ಲಿ ಕತ್ತಿ ಹಿಡಿದಿಲ್ಲವೆ? ತಲೆ ಹೊಡೆಯುವುದರಲ್ಲಿ ಸಮರ್ಥನೆಂದು ನಾನು ಕಾಣೆನೆ! ಅವಶ್ಯಕವಾಗಿ ಹೇಳುವೆನು.

ಶಕಾರ—ಚೇಟ, ನಡೆ. ಹೊರಟು ಹೋಗೋಣ.

ಚೇಟ—ಆದರೆ ನೀನು ಕತ್ತಿಯನ್ನು ತೆಗೆದುಕೊ.

ಶಕಾರ—ನಿನ್ನ ಕೈಯಲ್ಲೇ ಇರಲಿ.

ಚೇಟ—ನೀನು ನಮ್ಮ ಸ್ವಾಮಿಯಲ್ಲವೆ? ನಿನ್ನ ಕೈಯ್ಯಲ್ಲೇ ಇರಬೇಕು.

ಶಕಾರ–(ಕತ್ತಿಯನ್ನು ತಲೆಕೆಳಕಾಗಿ ಹಿಡಿದುಕೊಂಡು ಚೇಟನೊಡನೆ ಹೋಗುವನು).

ವಿದೂಷಕ–ರದನಿಕೆ, ಈ ಅಪಮಾನ ನಿನಗಲ್ಲ. ಪೂಜ್ಯನಾದ ಚಾರುದತ್ತನಿಗೆ. ಆತನಿಗೆ ಈ ವೃತ್ತಾಂತವನ್ನು ತಿಳಿಸಬೇಡ. ತಿಳಿಸಿದರೆ ಮೊದಲೇ ದಾರಿದ್ರ್ಯದಿಂದ ಸಂಕಟಪಡುತ್ತಿರುವ ಆ ನನ್ನ ಮಿತ್ರನು ಇನ್ನೂ ಹೆಚ್ಚಾಗಿ ಸಂಕಟಪಡುವನು.

ರದನಿಕೆ–ಅಯ್ಯಾ, ಮೈತ್ರೇಯನೆ, ಹೇಳುವುದಿಲ್ಲ. ಬಾಯಿ ಮುಚ್ಚಿಕೊಂಡೇ ಇರುವೆನು (ಹೋಗುವರು.)

ಚಾರುದತ್ತಃ :- (ವಸಂತಸೇನಾಮುದ್ದಿಶ್ಯ) ರದನಿಕೇ, ಮಾರುತಾಭಿಲಾಷೀ
ಪ್ರದೋಷಸಮಯಃ ಶೀತಾರ್ತೋ ರೋಹಸೇನಃ। ಪ್ರವೇಶ್ಯತಾ-
ಮಭ್ಯಂತರಮಯಂ। ಅನೇನ ಪ್ರಾವಾರಕೇಣ ಛಾದಯೈನಂ।
(ಇತಿ ಪ್ರಾವಾರಕಂ ಪ್ರಯಚ್ಛತಿ)

ವಸಂತಸೇನಾ :- (ಸ್ವಗತಂ) ಕಥಂ ಪರಿಜನ ಇತಿ ಮಾಮವಗಚ್ಛತಿ।
(ಪ್ರಾವಾರಕಂ ಗೃಹೀತ್ವಾ ಸಮಾಘ್ರಾಯ ಚ ಸ್ವಗತಂ ಸಸ್ಪೃಹಂ)
ಅಶೂನ್ಯಜಾತೀಕುಸುಮವಾಸಿತಃ ಪ್ರಾವಾರಕಃ। ಅನುದಾಸೀನ
ಮಸ್ಯ ಯೌವನಂ ಪ್ರತಿಭಾಸತೇ॥ (ಅನುದಾಸೀನಂ=ಅಭಿ
ಲಾಷಂ)

ಚಾರುದತ್ತಃ :- ನನು ರದನಿಕೇ ರೋಹಸೇನಂ ಗೃಹೀತ್ವಾಭ್ಯಂತರಂ
ಪ್ರವಿಶ॥

ವಸಂತಸೇನಾ - ಮಂದಭಾಗಿನೀ ಖಲ್ವಹಂ ತವಾಭ್ಯಂತರಸ್ಯ (ಸ್ವಗತ)

ಚಾರುದತ್ತಃ :- ನನು ರದನಿಕೇ, ಪ್ರತಿವಚನಮಪಿ ನಾಸ್ತಿ। ಕಷ್ಟಂ।
ಯದಾ ತು ಭಾಗ್ಯಕ್ಷಯಪೀಡಿತಾಂ ದಶಾಂ ನರಃ ಕೃತಾಂತೋಪಹಿತಾಂ ಪ್ರಪದ್ಯತೇ।
ತದಾಸ್ಯ ಮಿತ್ರಾಣ್ಯಪಿ ಯಾಂತ್ಯಮಿತ್ರತಾಂ ಚಿರಾನುರಕ್ತೋಽಪಿ ವಿರಜ್ಯತೇ ಜನಃ॥

(ರದನಿಕಾ ಪ್ರವಿಶ್ಯ)

ವಿದೂಷಕಃ :- ಭೋಃ ಇಯಂ ಸಾ ರದನಿಕಾ

ಚಾರುದತ್ತಃ :- ಇಯಂ ಸಾ ರದನಿಕಾ। ಇಯಮಪರಾ ಕಾ?
"ಅವಿಜ್ಞಾತಾವಸಕ್ತೇನ ದೂಷಿತಾ ಮಮ ವಾಸಸಾ।

ವಸಂತಸೇನಾ -(ಸ್ವಗತ) ನನು ಭೂಷಿತಾ।

ಚಾರುದತ್ತಃ :- 'ಛಾದಿತಾ ಶರದಭ್ರೇಣ ಚಂದ್ರಲೇಖೇವ ದೃಶ್ಯತೇ"॥
ಅಥವಾ ನಯುಕ್ತ ಪರಕಲತ್ರ ದರ್ಶನಂ।

ವಿದೂಷಕಃ :- ಭೋಃ, ಅಲಂ ಪರಕಲತ್ರದರ್ಶನಶಂಕಯಾ।
ಏಷಾ ವಸಂತಸೇನಾ ಕಾಮದೇವಾಯತನೋದ್ಯಾನಾತ್ಪ್ರಭೃತಿ
ತ್ವಾಮನುರಕ್ತಾ।

ಚಾರುದತ್ತಃ :- ಇಯಂ ವಸಂತಸೇನಾ? (ಸ್ವಗತಂ)
ಯಯಾ ಮೇ ಜನಿತಃ ಕಾಮಃ ಕ್ಷೀಣೇ ವಿಭವವಿಸ್ತರೇ।
ಕ್ರೋಧಃ ಕುಪುರುಷಸ್ಯೇವ ಸ್ವಗಾತ್ರೇಷ್ವೇವ ಸೀದತಿ॥ P.T.O.

ಚಾರುದತ್ತ– (ಪ್ರವೇಶಿಸಿ ತಲೆಬಾಗಿಸಿಕೊಂಡು ವಸಂತಸೇನೆಯನ್ನು ರದನಿಕೆಯೆಂದು ಭಾವಿಸಿ) ರದನಿಕೆ, ಈ ಸಾಯಂಕಾಲದ ಗಾಳಿಯು ತಣ್ಣಗೆ ಬೀಸುತ್ತಿರುವುದು. ರೋಹಸೇನನನ್ನು ಒಳಕ್ಕೆ ಕರೆದುಕೊಂಡು ಹೋಗು. ಬಹಿರ್ವಾಸವನ್ನು ಹೊದೆಯಿಸು (ಬಹಿರ್ವಾಸವನ್ನು ಕೊಡುವನು.)

ವಸಂತಸೇನೆ–(ಸ್ವಗತ) ಈತನು ನನ್ನನ್ನು ಸೇವಕಳೆಂದು ಭ್ರಮಿಸಿ ಹೀಗೆ ಹೇಳಿರಬಹುದು. ಆಶ್ಚರ್ಯ ಆಶ್ಚರ್ಯ ! ಇಷ್ಟು ದಾರಿದ್ರ್ಯದಲ್ಲಿಯೂ ತನ್ನ ಪೂರ್ವದ ಸೊಗಸನ್ನು ಬಿಟ್ಟಿಲ್ಲವಲ್ಲಾ ! (ಬಹಿರ್ವಾಸವನ್ನು ಹೊದೆದುಕೊಳ್ಳುವಳು).

ಚಾರುದತ್ತ–ರದನಿಕೆ, ರೋಹಸೇನನನ್ನು ಒಳಕ್ಕೆ ಕರೆದುಕೊಂಡು ಹೋಗು.

ವಸಂತಸೇನೆ–(ಸ್ವಗತ) ನಿರ್ಭಾಗ್ಯಳಾದ ನಾನು ನಿಮ್ಮ ಮನೆಯೊಳಕ್ಕೆ ಹೋಗುವಷ್ಟು ಪುಣ್ಯವತಿಯೇ ?

ಚಾರುದತ್ತ–ರದನಿಕೆ, ನನಗೆ ಉತ್ತರವೇ ಇಲ್ಲವೊ? ಕಷ್ಟಕಷ್ಟ. ಐಶ್ವರ್ಯ ಹೋದಾಗ ಮಿತ್ರರೆಲ್ಲರೂ ಶತ್ರುಗಳಾಗುವರು. ಬಹುಕಾಲದಿಂದ ವಿಶ್ವಾಸಿಗಳಾಗಿದ್ದ ಜನರೂ ಕೂಡ ದೂರವಾಗುವರು.

ವಿದೂಷಕ–(ರದನಿಕೆಯೊಡನೆ ಬಂದು) ಇದೊ. ಇವಳು ರದನಿಕೆ.

ಚಾರುದತ್ತ–ಇವಳೇ ರದನಿಕೆ ! ಆದರೆ ಅವಳಾರು ? ತಿಳಿಯದೆ ನನ್ನ ಬಹಿರ್ವಾಸವನ್ನು ಪರಸ್ತ್ರೀಯ ಕೈಗೆ ಕೊಟ್ಟೆನಲ್ಲಾ.

ವಸಂತಸೇನೆ–(ಸ್ವಗತ) ಪರಸ್ತ್ರೀಯಲ್ಲ. ಸ್ವಸ್ತ್ರೀಯೇ.

ಚಾರುದತ್ತ–ಆಃ ಇವಳು ಈ ಬಹಿರ್ವಾಸವನ್ನು ಹೊದೆದುಕೊಂಡಿದ್ದರೆ ಶರತ್ಕಾಲದ ಮೇಘದಿಂದ ಪರಿವೃತವಾದ ಚಂದ್ರರೇಖೆಯಂತೆ ಕಾಣುವಳಲ್ಲಾ. ಅಥವಾ ಪರಸ್ತ್ರೀಯನ್ನು ನೋಡುವುದು ಯುಕ್ತವಲ್ಲ.

ವಿದೂಷಕ–ಅಯ್ಯಾ, ನಿನಗೆ ಪರಸ್ತ್ರೀಯೆಂಬ ಶಂಕೆ ಬೇಡ. ಇವಳು ವಸಂತಸೇನೆ.

ಚಾರುದತ್ತ–ವಸಂತಸೇನೆಯೇ ?

ವಿದೂಷಕ–ಅಹುದು, ರಾಜಶ್ಯಾಲಕನಾದ ಶಕಾರನು ನಿನಗೆ ಒಂದು ಮಾತನ್ನು ತಿಳಿಸುವಂತೆ ಹೇಳಿರುವನು.

ಚಾರುದತ್ತ–ಅದೇನು ?

ವಿದೂಷಕ–"ಈ ವಸಂತಸೇನೆಯು ನಾನು ಎಷ್ಟು ಬಲಾತ್ಕರಿಸಿದರೂ ಸ್ವಾಧೀನಳಾಗದೆ ನಿಮ್ಮ ಮನೆಗೆ ಬಂದಿರುವಳು. ಅವಳನ್ನು ನನಗೆ ಒಪ್ಪಿಸಿದರೆ ಸರಿ. ಇಲ್ಲದಿದ್ದರೆ ನಿನಗೂ ನನಗೂ ಆಮರಣಾಂತವಾಗಿ ದ್ವೇಷವು ತಪ್ಪದು" ಎಂದು ಹೇಳಿರುವನು.

ವಸಂತಸೇನೆ– (ಸ್ವಗತ) ಬಲಾತ್ಕರಿಸಿದರೂ ಸ್ವಾಧೀನಳಾಗಲಿಲ್ಲವೆಂಬ ಮಾತಿನಿಂದ ನನಗೆ ಬಹಳ ಸಂತೋಷವಾಯಿತು.

ಚಾರುದತ್ತ–ಏನು ಶಕಾರನೊ? ಅಜ್ಞ! (ಸ್ವಗತ) ನಾನು ತಿಳಿಯದೆ ಒಳಕ್ಕೆ ಹೋಗೆಂದು ಹೇಳಿವರೂ ಈಕೆಯು ಒಳಕ್ಕೆ ಹೋಗಲಿಲ್ಲ. ಪರಪುರುಷರೆಷ್ಟು ನಿರ್ಬಂಧವಮಾಡಿದರೂ ವಿಶೇಷವಾಗಿ ಆವ ಮಾತನ್ನೂ ಆಡಲಿಲ್ಲ. ಎಷ್ಟು ಶ್ಲಾಘ್ಯಳು! (ಪ್ರಕಾಶ) ವಸಂತಸೇನೆಯೇ, ಬಹಳವಾಗಿ ಅಪರಾಧವಮಾಡಿದೆನು.

ರಾಗ ॥ ತಾಳ ॥

ಕ್ಷಮಿಸೀಗನೀಂ । ರಮಣೀಮಣಿ ॥ ಪ ॥
ಭ್ರಮೆಯಿಂದನಾ । ಕ್ರಮವಿಾರಿದೆ ॥ ಅ ॥
ಜಲಜಾಂಬಕಿ । ತಿಳಿಯದೆನಾಂ । ಬಲುತಪ್ಪಿತಂ । ಗಳಗೈದೆನು ॥೧॥

ವಸಂತಸೇನೆ—

ಭಿನ್ನವೇಷದಿಂ। ನಿನ್ನಕಂಡೆನು। ನನ್ನದೋಷವಂ। ಮನ್ನಿಸೈಪ್ರಿಯ ॥೨॥

ಚಾರುದತ್ತ—

ಪತಿಗೈದತ। ಪ್ಪಿತಸೈಸುವುದೆ। ಸತಿಯರ್ಗೆಕೇಳ್। ಗತಿಯಾದುದು ॥೩॥

ವಸಂತಸೇನೆ—

ಅನಿಮಿತ್ತವಾ। ದನುತಾಪಕೆ । ಮನದನ್ನನಿ। ನ್ನನುಗೈದೆನು ॥೪॥

(ಸ್ವಗತ) ಓಹೋ! ಮರೆತೆ. ಈತನಿಗೆ ನನ್ನ ಒಡವೆಗಳನ್ನು ಕೊಟ್ಟು ಹೋಗಬೇಕೆಂದಲ್ಲವೆ ನಾನು ಬಂದುದು. ಮಾತನಾಡುವ ಸಂಭ್ರಮದಲ್ಲಿ ಇಷ್ಟುಹೊತ್ತಾದರೂ ತೋರಲಿಲ್ಲ. ಈಗಲಾದರೂ ಜಾಗ್ರತೆ ಮಾಡುವೆನು. (ಪ್ರಕಾಶ) ಆರ್ಯನೆ, ನೀನು ನನ್ನನ್ನು ರಕ್ಷಿಸುವುದಾದರೆ

ಚಾರುದತ್ತ:- ಅಯೋಗ್ಯಮಿದಂ ನ್ಯಾಸಸ್ಯ ಗೃಹಂ। (ಭಗ್ನತ್ವಾತ್ ರಕ್ಷಣಾಭಾವಾಚ್ಚ ಅಯೋಗ್ಯತಾ)

ವಸಂತಸೇನಾ—

ಆರ್ಯ ಅಲೀಕಂ। ಪುರುಷೇಷು ನ್ಯಾಸಾ ನಿಕ್ಷಿಪ್ಯಂತೇ, ನ ಪುನರ್ಗೇಹೇಷು।

ಚಾರುದತ್ತ:- ಮೈತ್ರೇಯ ಗೃಹ್ಯತಾಮಯಮಲಂಕಾರ:

ವಸಂತಸೇನಾ- ಅನುಗೃಹೀತಾಸ್ಮಿ (ಇತ್ಯಲಂಕಾರಮರ್ಪಯತಿ)।

ವಿದೂಷಕ:- ಸ್ವಸ್ತಿ ಭವತ್ಯೈ।

ಚಾರುದತ್ತ:- ಧಿಙ್ ಮೂರ್ಖ, ನ್ಯಾಸ: ಖಲ್ವಯಂ

ವಿದೂಷಕ:-(ಅಪವಾರ್ಯ) ತದೇವಂ ತದಾ ಚೋರೈರ್ಹ್ರಿಯತಾಂ।
(ಇತಿ ಸಂಧಿಚ್ಛೇದನಾದಿ: ತು ಚೌರ್ಯಾಂಗಸ್ಯ ಸೂಚನಂ)

ಚಾರುದತ್ತ:- ಅಚಿರೇಣೈವ ಕಾಲೇನ

ವಿದೂಷಕ:- ಏಷೋಽಸ್ಯಾ: ಅಸ್ಮಾಕಂ ನ್ಯಾಸ:

ಚಾರುದತ್ತ:- ನಿರ್ಯಾತಯಿಷ್ಯೇ

ವಸಂತಸೇನ:- ಆರ್ಯ ಇಚ್ಛಾಮ್ಯಹಮನೇನ ಆರ್ಯೇಣ ಅನುಗಮ್ಯಮಾನಾ ಸ್ವಕಂ ಗೇಹಂ ಗಂತುಂ।

ಚಾರುದತ್ತ:- ಮೈತ್ರೇಯ ಅನುಗಚ್ಛ ತತ್ರಭವತೀಂ।

ವಿದೂಷಕ:- ತ್ವಮೇವೈತಾಂ ಕಲಹಂಸಗಾಮಿನೀಮನುಗಚ್ಛನ್ ರಾಜಹಂಸ ಇವ ಶೋಭಸೇ। ಅಹಂ ಪುನರ್ಬ್ರಾಹ್ಮಣೋ ಯತ್ರ ತತ್ರ ಜನೈ: ಚತುಷ್ಪಥೋಪನೀತ: ಉಪಹಾರ: ಶುನಕೈರಿವ ಖಾದ್ಯಮಾನೋ ವಿಪತ್ಸ್ಯೇ। (ಯತ ಏವ ನಿರ್ಧನೋಽತ ಏವಾವಮಾನಿತ:)

ಚಾರುದತ್ತ:- ಏವಂ ಭವತು। ಸ್ವಯಮೇವಾನುಗಚ್ಛಾಮ್ಯತ್ರ ಭವತೀಂ। ತದ್ರಾಜಮಾರ್ಗವಿಶ್ವಾಸಯೋಗ್ಯಾ: ಪ್ರಜ್ವಾಲ್ಯಂತಾಂ ಪ್ರದೀಪಿಕಾ:।

ಈ ಒಡವೆಗಳನ್ನು ಇಲ್ಲಿಯೇ ಇಟ್ಟುಕೊಂಡಿರಬೇಕು. ಏಕೆಂದರೆ ಒಡವೆಗಳಿಗೋಸ್ಕರವೇ ಆ ಪಾಪಿಷ್ಟರು ನನ್ನನ್ನು ಪೀಡಿಸುವರು.

ಚಾರುದತ್ತ—ನಿನ್ನ ಒಡವೆಗಳನ್ನು ಭದ್ರಪಡಿಸುವುದಕ್ಕೆ ಇದು ಯೋಗ್ಯವಾದ ಮನೆಯಲ್ಲವಲ್ಲಾ!

ವಸಂತಸೇನೆ–ಲೋಕದಲ್ಲಿ ಜನರನ್ನು ನೋಡಿ ಒಡವೆಗಳನ್ನು ಇಡುವರೇ ಹೊರತು ಮನೆಯನ್ನು ನೋಡಿ ಅಲ್ಲವಷ್ಟೆ ?

ಚಾರುದತ್ತ–ಮೈತ್ರೇಯನೆ, ಈ ಒಡವೆಗಳನ್ನು ತೆಗೆದುಕೊ.

ವಸಂತಸೇನೆ– ನಾನು ಧನ್ಯಳಾದೆನು. (ಒಡವೆಗಳನ್ನು ಕೊಡುವಳು.)

ವಿದೂಷಕ–(ತೆಗೆದುಕೊಂಡು) ವಸಂತಸೇನೆಯೆ, ನೀನು ತಣ್ಣಗಿರು.

ಚಾರುದತ್ತ–ಎಲಾ ಮೂರ್ಖನೆ, ಈ ಒಡವೆಗಳನ್ನು ಕೆಲವುದಿನ ಇಟ್ಟಿರುವುದಕ್ಕೆ ಕೊಟ್ಟಿರುವಳು.

ವಿದೂಷಕ–(ಸ್ವಗತ) ಅಯ್ಯೋ! ನನಗೇ ಕೊಟ್ಟಳೇನೊ ಎಂದು ತಿಳಿದುಕೊಂಡಿದ್ದೆ. ಹಾಗಾದರೆ ಯಾರಾದರೂ ಕಳ್ಳರು ಕದ್ದುಕೊಂಡು ಹೋಗಲಿ ?

ಚಾರುದತ್ತ–ಕೆಲವುದಿನಗಳಲ್ಲೆ—

ವಿದೂಷಕ–ಹೋಗುವುವೊ ?

ಚಾರುದತ್ತ–ಇಲ್ಲ. ಹಿಂದಕ್ಕೆ ಕೊಡಬೇಕು.

ವಸಂತಸೇನೆ–ಆರ್ಯನೆ, ನನ್ನ ಸಂಗಡ ಈತನನ್ನು ಕಳುಹಿಸಿ ಕೊಟ್ಟರೆ ಮನೆಗೆ ಹೋಗುವೆನು.

ಚಾರುದತ್ತ–ಮೈತ್ರೇಯನೆ, ವಸಂತಸೇನೆಯ ಹಿಂದೆ ಹೋಗು.

ವಿದೂಷಕ–ನೀನು ರಾಜಹಂಸ, ಈಕೆ ಕಲಹಂಸಗಾಮಿನಿ. ನೀವಿಬ್ಬರೂ ಜತೆಯಲ್ಲಿ ಹೋದರೆ ಚೆನ್ನಾಗಿರುವುದು. ನಾನು ಬಡಬ್ರಾಹ್ಮಣ. ನಾನು ಹೋದರೆ ನಾಲ್ಕು ದಾರಿ ಕೂಡಿದ ಸ್ಥಳದಲ್ಲಿ ಹಾಕಿದ ಅನ್ನವನ್ನು ನಾಯಿಗಳು ತಿನ್ನುವಂತೆ ನನ್ನನ್ನು ಜನಗಳು ಕಿತ್ತು ತಿಂದುಹಾಕುವರು.

ಚಾರುದತ್ತ–ಹಾಗೆಯೇ ಆಗಲಿ, ನಾನೇ ಹೋಗುವೆನು.

ವಿದೂಷಕ–ಎಲೋ, ವರ್ಧಮಾನಕ, ದೀಪಗಳನ್ನು ಹೊತ್ತಿಸು.

ಚಾರುದತ್ತ–ಮೈತ್ರೇಯನೆ, ದೀಪ ಬೇಡ ; ಏಕೆಂದರೆ,

ಕಂದ॥ ತರುಣೀಕಪೋಲ ಪಾಂಡುರ
ಕರನೀಯಮೃತಾಂಶು ಪುದಯಿಸುಂಗಡ ಜೊನ್ನಂ ।
ಮರೆಗುಂ ಕಳ್ತಲೆಯೊಳ್ ಸುರು
ಚಿರಮೆನಿಪಾ ಪಾಲಧಾರೆ ಕೆಸರೊಳಗೆಸೆವೊಲ್ ॥

ಆದುದರಿಂದ ಮಿತ್ರನೆ, ವಸಂತಸೇನೆಯನ್ನು ಅವಳ ಮನೆಗೆ ಬಿಟ್ಟುಬರುವೆನು—ಈಗ ಅರ್ಧರಾತ್ರದ ಸಮಯ ; ಮಾರ್ಗದಲ್ಲಿ ಯಾರೂ ಇಲ್ಲ. ರಾಜದೂತರು ಮಾತ್ರ ಸಂಚರಿಸುತ್ತಿರುವರು. ವಂಚನಾಬುದ್ಧಿಯನ್ನು ಬಿಡಬೇಕು. ರಾತ್ರಿಕಾಲದಲ್ಲೇ ಬಹು ದೋಷಗಳು ಸಂಭವಿಸುವುವು. (ನಡೆದು) ಈ ಒಡವೆಯ ಗಂಟನ್ನು ರಾತ್ರಿವೇಳೆ ನೀನು ಕಾದುಕೊಂಡಿರಬೇಕು. ಹಗಲೆಲ್ಲಾ ವರ್ಧಮಾನಕನು ಕಾದುಕೊಂಡಿರುವನು.

ವಿದೂಷಕ—ಅಪ್ಪಣೆಯ ಪ್ರಕಾರ (ಎಂದು ಹೋಗುವರು.)

ಇದು

ಅಲಂಕಾರನ್ಯಾಸವೆಂಬ ಮೊದಲನೆಯಂಕಂ.

———



ವಿದೂಷಕಃ:- ವರ್ಧಮಾನಕ, ಪ್ರಜ್ವಾಲಯ ಪ್ರದೀಪಿಕಾಮ್।

ಚೇಟಃ - ಅರೇ ತೈಲೇನ ವಿನಾ ಪ್ರದೀಪಿಕಾಃ ಪ್ರಜ್ವಾಲ್ಯಂತೇ

ವಿದೂಷಕಃ:-(ಜನಾಂತಿಕಂ) ಆಶ್ಚರ್ಯಂ, ಭೋ! ಖಲ್ವಸ್ಮಾಕಂ ಪ್ರದೀಪಿಕಾ ಅಪಮಾನಿತನಿರ್ಧನಕಾಮುಕಾ ಇವ ಗಣಿಕಾ ನಿಸ್ನೇಹಾ ಇದಾನೀಂ ಸಂವೃತ್ತಾ।

ಚಾರುದತ್ತಃ:- ಮೈತ್ರೇಯ, ಭವತು। ಕೃತಪ್ರದೀಪಿಕಾಃ। ಪಶ್ಯ।

ಉದಯತಿ ಹಿ ಶಶಾಂಕಃ ಕಾಮಿನೀಗಂಡಪಾಂಡು
ಗ್ರಹಗಣಪರಿವಾರೋ ರಾಜಮಾರ್ಗಪ್ರದೀಪಃ।
ತಿಮಿರನಿಕರಮಧ್ಯೇ ರಶ್ಮಯೋ ಯಸ್ಯ ಗೌರಾಃ
ಸ್ರುತಜಲ ಇವ ಪಂಕೇ ಕ್ಷೀರಧಾರಾ ಪತಂತಿ॥

(ಸಾನುರಾಗಂ) ಭವತಿ ವಸಂತಸೇನೇ, ಇದಂ ಭವತ್ಯಾ ಗೃಹಂ ಪ್ರವಿಶತು ಭವತೀ।
(ವಸಂತಸೇನಾ ಸಾನುರಾಗಮವಲೋಕಯಂತೀ ನಿಷ್ಕ್ರಾಂತಾ)

ಚಾರುದತ್ತಃ:- ವಯಸ್ಯ ಗತಾ ವಸಂತಸೇನಾ। ತದೇಹಿ। ಗೃಹಮೇವ ಗಚ್ಛಾವಃ।

ರಾಜಮಾರ್ಗೋ ಹಿ ಶೂನ್ಯೋಽಯಂ ರಕ್ಷಿಣಃ ಸಂಚರಂತಿ ಚ।
ವಂಚನಾ ಪರಿಹರ್ತವ್ಯಾ ಬಹುದೋಷಾ ಹಿ ಶರ್ವರೀ॥

(ಪರಿಕ್ರಮ್ಯ) ಇದಂ ಚ ಸುವರ್ಣಭಾಂಡಂ ರಕ್ಷಿತವ್ಯಂ ತ್ವಯಾ ರಾತ್ರೌ, ವರ್ಧಮಾನಕೇನ ಅಪಿ ದಿವಾ।

ವಿದೂಷಕಃ:- ಯಥಾ ಭವಾನಾಜ್ಞಾಪಯತಿ। (ಇತಿ ನಿಷ್ಕ್ರಾಂತೌ)

ಇತಿ
# ಅಲಂಕಾರನ್ಯಾಸಃ

ವಸಂತಸೇನಾ — ಚೇಟಿ, ಯಥಾ ರೂಢಶ್ಶೋಭಯಾಮಿ ಪ್ರೇಮಾಯ ಜನಂ ಪರಿತ್ಯಜ್ಯ
ದೇಶಾಂತರಗಮನೇನ ಪರಿಜನೋ ಮದ್ವಿಯೋಗಜಂ ದುಃಖಮನುಭವತಿ।

ಮದನಿಕಾ — ಆರ್ಯೇ, ನ ರಾಜಾ, ನ ರಾಜವಲ್ಲಭಃ, ನ ಬ್ರಾಹ್ಮಣಃ, ನ ವಣಿಗ್ಜನಃ।
ತತ್ಕ ಇದಾನೀಂ ನ ಭರ್ತೃದಾರಿಕಯಾ ಕಾಮ್ಯತೇ?

ವಸಂತಸೇನಾ — ಚೇಟಿ, ತ್ವಂ ಮಯಾ ಸಹ ಕಾಮದೇವಾಯತನೋದ್ಯಾನಂ ಗತಾಸಿ।

ಮದನಿಕಾ — ಆರ್ಯೇ ಗತಾಸ್ಮಿ.

ವಸಂತಸೇನಾ — ತಥಾಪಿ ಮಾಂ ಉದಾಸೀನೇವ ಪೃಚ್ಛಸಿ

ಮದನಿಕಾ — ಜ್ಞಾತಂ। ಕಿಂ ಸ ಏವ ಯೇನಾರ್ಯಾ ಶರಣಾಗತಾಭ್ಯುಪಪನ್ನಾ?

ವಸಂತಸೇನಾ — ಕಿನ್ನಾಮಧೇಯಃ ಖಲು ಸಃ?

ಮದನಿಕಾ — ಸ ಖಲು ಶ್ರೇಷ್ಠಿಚತ್ವರೇ ಪ್ರತಿವಸತಿ।

ವಸಂತಸೇನಾ — ಅಯಿ ನಾಮಾಸ್ಯ ಪೃಚ್ಛಾಮಿ।

ಮದನಿಕಾ — ಸ ಖಲು ಆರ್ಯೇ, ಸುಗೃಹೀತನಾಮಧೇಯ ಆರ್ಯಚಾರು-
ದತ್ತೋ ನಾಮ।

ವಸಂತಸೇನಾ — (ಸಹರ್ಷಂ) ಸಾಧು ಮದನಿಕೇ ಸಾಧು। ಸುಷ್ಠು ತ್ವಯಾ ಜ್ಞಾತಂ।

ಮದನಿಕಾ — (ಸ್ವಗತಂ) ಏವಂ ತಾವತ್। ಆರ್ಯೇ ದರಿದ್ರಃ ಖಲು ಸ ಶ್ರೂಯತೇ।

ವಸಂತಸೇನಾ — ಅತ ಏವ ಕಾಮ್ಯತೇ ದರಿದ್ರಪುರುಷಸಂಕ್ರಾಂತಮನಾಃ
ಖಲು ಗಣಿಕಾ ಲೋಕೇ ಅವಚನೀಯಾ ಭವತಿ।

ಮದನಿಕಾ — ಆರ್ಯೇ, ಕಿಂ ಹೀನಕುಸುಮಂ ಸಹಕಾರಪಾದಪಂ ಮಧುಕರ್ಯಃ
ಪುನಃ ಸೇವಂತೇ?

ವಸಂತಸೇನಾ — ಅತ ಏವ ತಾ ಮಧುಕರ್ಯಃ ಉಚ್ಯಂತೇ

ಮದನಿಕಾ — ಆರ್ಯೇ, ಯದಿ ಸ ಮನೀಷಿತಸ್ತತ್ಕಿಮಿದಾನೀಂ
ಸಹಸಾ ನಾಭಿಸಾರ್ಯತೇ?

ವಸಂತಸೇನಾ — ಚೇಟಿ, ಸಹಸಾಭಿಸಾರ್ಯಮಾಣಃ ಪ್ರತ್ಯುಪಕಾರದುರ್ಬಲ-
ತಯಾ, ಮಾ ತಾವತ್, ಜನೋ ದುರ್ಲಭದರ್ಶನಃ ಪುನರ್ಭವಿಷ್ಯತಿ।

ಮದನಿಕಾ — ಕಿಮತ ಏವ ಸೋಽಲಂಕಾರಸ್ತಸ್ಯ ಹಸ್ತೇ ನಿಕ್ಷಿಪ್ತಃ?

ವಸಂತಸೇನಾ — ಚೇಟಿ, ಸುಷ್ಠು ತ್ವಯಾ ಜ್ಞಾತಂ।

(ನೇಪಥ್ಯೇ)

ಅರೇ ಭಟ್ಟಾರಕ, ದಶಸುವರ್ಣಸ್ಯ ರುದ್ಧೋ ದ್ಯೂತಕರಃ ಪ್ರಪಲಾಯಿತಃ ಪ್ರಪಲಾಯಿತಃ। ತದ್ಗೃಹಾಣ ಗೃಹಾಣ। ತಿಷ್ಠ ತಿಷ್ಠ। ದೂರಾತ್ಪ್ರದೃಷ್ಟೋಽಸಿ।

(ಪ್ರವಿಶ್ಯಾಪಟೀಕ್ಷೇಪೇಣ ಸಂಭ್ರಾಂತಃ)

ಸಂವಾಹಕಃ — ಆಶ್ಚರ್ಯಂ ಕಷ್ಟಂ ಏಷ ದ್ಯೂತಕರಭಾವಃ।

नवबन्धनमुक्तयेव गर्दभ्या हा ताडितोऽस्मि गर्दभ्या
अङ्गराजमुक्तयेव हा शक्त्या घटोत्कच इव घातितोऽस्मि शक्त्या

ಲೇಖಕವ್ಯಾಪೃತಹೃದಯಂ ಸಭಿಕಂ ದೃಷ್ಟ್ವಾ ಝಟಿತಿ ಪ್ರಭ್ರಷ್ಟಃ।
ಇದಾನೀಂ ಮಾರ್ಗನಿಪತಿತಃ ಕಂ ನು ಖಲು ಶರಣಂ ಪ್ರಪದ್ಯೇ॥

ತದ್ಯಾವದೇತೌ ಸಭಿಕದ್ಯೂತಕರಾವನ್ಯತೋ ಮಾಮನ್ವಿಷ್ಯತಃ, ತಾವದಹಂ ವಿಪರೀತಾಭ್ಯಾಂ ಪಾದಾಭ್ಯಾಂ ಏತಚ್ಛೂನ್ಯದೇವಕುಲಂ ಪ್ರವಿಶ್ಯ ದೇವೀ ಭವಿಷ್ಯಾಮಿ। (ಬಹುವಿಧಂ ನಾಟ್ಯಂ ಕೃತ್ವಾ ತಥಾ ಸ್ಥಿತಃ)

(ತತಃ ಪ್ರವಿಶತಿ ಮಾಥುರೋ ದ್ಯೂತಕರಶ್ಚ)

ಮಾಥುರಃ — ಅರೇ ಭಟ್ಟಾರಕ ದಶಸುವರ್ಣಸ್ಯ ರುದ್ಧೋ ದ್ಯೂತಕರಃ ಪ್ರಪಲಾಯಿತಃ ಪ್ರಪಲಾಯಿತಃ। ತದ್ಗೃಹಾಣ ಗೃಹಾಣ। ತಿಷ್ಠ ತಿಷ್ಠ। ದೂರಾತ್ಪ್ರದೃಷ್ಟೋಽಸಿ।

ದ್ಯೂತಕರಃ — ಯದಿ ವ್ರಜಸಿ ಪಾತಾಲಮಿಂದ್ರಂ ಶರಣಂ ಚ ಸಾಂಪ್ರತಂ ಯಾಸಿ।
ಸಭಿಕಂ ವರ್ಜಯಿತ್ವಾ ರುದ್ರೋಽಪಿ ನ ರಕ್ಷಿತುಂ ತರತಿ॥

ಮಾಥುರಃ —
ಕುತ್ರ ಕುತ್ರ ಸಭಿಕವಿಪ್ರಲಂಭಕ ಪಲಾಯಸೇ ರೇ ಭಯವೇಪಿತಾಂಗಕ।
ಪದೇ ಪದೇ ಸಮವಿಷಮಂ ಸ್ಖಲನ್ ಕುಲಂ ಯಶೋಽತಿಕೃಷ್ಣಂ ಕುರ್ವನ್।

ದ್ಯೂತಕರಃ — (ಪದಂ ವೀಕ್ಷ್ಯ) ಏಷ ವ್ರಜತಿ। ಇಯಂ ಪ್ರನಷ್ಟಾ ಪದವೀ।

ಮಾಥುರಃ — (ಆಲೋಕ್ಯ ಸವಿತರ್ಕಂ) ಅರೇ ವಿಪ್ರತೀಪೌ ಪಾದೌ। ಪ್ರತಿಮಾಶೂನ್ಯಂ ದೇವಕುಲಂ। ಧೂರ್ತೋ ದ್ಯೂತಕರೋ ವಿಪ್ರತೀಪಾಭ್ಯಾಂ ಪಾದಾಭ್ಯಾಂ ದೇವಕುಲಂ ಪ್ರವಿಷ್ಟಃ।

# ಎರಡನೆಯಂಕಂ

---

ಸಂವಾಹಕ—(ಓಡಿಬಂದು) ಅಯ್ಯೋ ! ಜೂಜಾಡುವುದು ಬಹು ಕಷ್ಟ. ಒಂದು ನಿಮಿಷದಲ್ಲಿ ಹತ್ತು ವರಹಗಳನ್ನೂ ಸೋತುಬಿಟ್ಟೆನಲ್ಲಾ ! ನನ್ನ ಪುಣ್ಯದಿಂದ ಮಧ್ಯಸ್ಥನಾದ ಸಭಿಕನು ಏನೋ ಜ್ಞಾನದಲ್ಲಿದ್ದನು. ಅದೇ ಸಮಯವೆಂದು ಮೆಲ್ಲಗೆ ತಪ್ಪಿಸಿಕೊಂಡು ಈ ರಾಜಮಾರ್ಗಕ್ಕೆ ಓಡಿಬಂದೆ. ಇನ್ನು ಯಾರನ್ನು ಮರೆಹೊಗಲಿ ? ನನಗಾರು ದಿಕ್ಕು ? ಈಗ ಮಧ್ಯಸ್ಥಗಾರನೂ ಜೂಜುಗಾರನೂ ನನ್ನನ್ನು ಹುಡುಕಿಕೊಂಡು ಬರುವರು. ಅಷ್ಟರಲ್ಲಿಯೇ ನಾನು ಈ ಪಾಳುದೇವಸ್ಥಾನಕ್ಕೆ ಹಿಂದುಮುಖನಾಗಿ ಹೋಗಿ ದೇವರ ವಿಗ್ರಹದಂತೆ ನಿಂತುಕೊಳ್ಳುವೆನು. ಇಲ್ಲದೆಇದ್ದಪಕ್ಷದಲ್ಲಿ ಅವರು ಬೇರೆ ನನ್ನನ್ನು ಬಿಡುವುದಿಲ್ಲ. ಇನ್ನು ಈ ಜೂಜಾಟ ಜನ್ಮಜನ್ಮಾಂತರಕ್ಕೂ ಬೇಡ ಎಂದು (ಹೋಗಿ ವಿಗ್ರಹದಂತೆ ನಿಂತುಕೊಳ್ಳುವನು).

ಮಾಧುರ–(ಸಭಿಕನೊಡನೆ ಬಂದು) ಅಯ್ಯಾ, ಸಭಿಕನೆ, ಸೋತು ಓಡಿಹೋಗುತ್ತಿರುವವನನ್ನು ಹಿಡಿದುಕೊ, ಹಿಡಿದುಕೊ.

ಸಭಿಕ–ಎಲೋ, ನೀಚ, ನೀನು ಪಾತಾಳಕ್ಕೆ ಹೋಗು ; ಅಥವಾ ಇಂದ್ರನನ್ನು ಮರೆಹೋಗು. ಸಭಿಕನಿಗೆ ಮೋಸಮಾಡಿಹೋದ ನಿನ್ನನ್ನು ಆ ಫಾಲಾಕ್ಷನೂ ರಕ್ಷಿಸಲಾರನು.

ಮಾಧುರ–ಎಲೋ, ಸಭಿಕನನ್ನು ವಂಚಿಸಿ ನಿನ್ನ ಕುಲದಮೇಲೂ ದೃಷ್ಟಿಯಿಲ್ಲದೆ ಏಕೆ ಓಡುವೆ ? ನೀನೆಲ್ಲಿಗೆ ಹೋದರೆತಾನೆ ತಪ್ಪೀತು.

ಸಭಿಕ–ಇದೊ, ಇಲ್ಲೇ ಹೋಗಿರುವನು. ಹಜ್ಜೆಯ ಗುರುತು ಇಲ್ಲಿಗೆ ಮುಗಿದಿರುವುದು, ನೋಡು.

ಮಾಧುರ–(ಹಾಗೆಯೇ ಯೋಚಿಸಿ ನೋಡಿ) ಎಲಾ, ಈ ಹಜ್ಜೆಗಳು ಹಿಂದುಮುಖನಾಗಿ ನಡೆದುಕೊಂಡು ಹೋಗಿರುವಹಾಗೆ ಇದೆ. ಈ ಗುಡಿಯಲ್ಲಿ ಏನೋ ಒಂದು ವಿಗ್ರಹ ಕಾಣಿಸುವುದು. ಇದುವರೆಗೆ ಏನೂ

ಇರಲಿಲ್ಲ. (ಯೋಚಿಸಿ) ಸಭಿಕನೇ ! ಗೊತ್ತಾಯಿತು. ಆ ಸಂವಾಹಕನು ಈಗತಾನೆ ಹೊರಕ್ಕೆ ಹೋದನೆಂದು ತಿಳಿಯುವಂತೆ ಹಿಂದುಮುಖನಾಗಿ ದೇವಸ್ಥಾನಕ್ಕೆ ಹೋಗಿರುವನು.

ಸಭಿಕ–ಆಹಾ ಸರಿ; ಅವನು ದೊಡ್ಡ ಕಳ್ಳನು. ಹೀಗೆ ಹಜ್ಜೆಗಳನ್ನಿಟ್ಟುಕೊಂಡು ಈ ದೇವಾಲಯಕ್ಕೇ ಹೋಗಿರಬಹುದು. ಹೋಗಿ ನೋಡೋಣ (ಇಬ್ಬರೂ ಬಂದು ಸನ್ನೆಮಾಡಿ ಕೈಗಳಿಂದ ತೋರಿಸುವರು.)

ಸಭಿಕ–ಇದೇನು ? ಮರದ ವಿಗ್ರಹವೊ ?

ಮಾಥುರ–ಅಲ್ಲ ; ಕಲ್ಲಿನದು. (ಸಂವಾಹಕನನ್ನು ಕೈಯಿಂದ ಅಲ್ಲಾಡಿಸಿ ಹೊಡೆದು) ಎಂತಹುದಾದರೂ ಆಗಲಿ, ಬಾರೋ ; ಇಲ್ಲೊಂದಾಟ ಹಾಕೋಣ (ಆಡುವರು.)

ಸಂವಾಹಕ–(ಸ್ವಗತ) ಇದನ್ನು ನೋಡಿದರೆ, ನನಗೂ ಸ್ವಲ್ಪ ಚಾಪಲ್ಯವುಂಟಾಗುವುದಲ್ಲ. ಏನುಮಾಡಲಿ ?

ಸಭಿಕ–ಈ ಆಟವನ್ನು ನಾನು ಹೊಡೆಯುವೆನು.

ಮಾಥುರ–ಅಲ್ಲ ಅಲ್ಲ. ಈ ಆಟ ನನ್ನದು.

ಸಂವಾಹಕ–ಈ ಆಟವನ್ನು ನಾನು ಬಿಟ್ಟರೆತಾನೇ ನೀವಿಬ್ಬರೂ ಹೊಡೆಯುವುದು (ಮುಂದೆ ಬರುವನು.)

ಸಭಿಕ–ಕಳ್ಳ ಸಿಕ್ಕಿದ !

ಮಾಥುರ–(ಹಿಡಿದುಕೊಂಡು) ಎಲೋ ! ಭಂಡ, ಈಗ ನನ್ನ ಕೈಗೆ ಸಿಕ್ಕಿದೆ, ಮೊದಲು ಹತ್ತುವರಹಗಳನ್ನು ಕೊಟ್ಟು ಆಚೆಗೆ ಹೋಗು, ಎಚ್ಚರಿಕೆ !

ಸಂವಾಹಕ–(ಸ್ವಗತ) ಅಯ್ಯೋ ! ಸಿಕ್ಕಿಬಿಟ್ಟೆನಲ್ಲಾ ! ನಾನು ಬಾಯಿಮುಚ್ಚಿಕೊಂಡು ಸುಮ್ಮನಿರಬೇಕಾಗಿತ್ತು. ಈ ಹಾಳು ಜೂಜಾಟವೇ ಕೆಟ್ಟುದು. ನರಿ ಕಕ್ಕೆಕಾಯವ್ರತ ಹಿಡಿದಹಾಗೆ. (ಪ್ರಕಾಶ) ಅಯ್ಯಾ ! ಕೊಡುವೆನು.

ಮಾಥುರ–ಎಲೋ ಕಳ್ಳಾ ! ಮೊದಲು ಇಲ್ಲಿಹಾಕು.

ಸಂವಾಹಕ–ಕೊಡುವೆನು. ಸ್ವಲ್ಪತಾಳು.

ಮಾಥುರ–ಕೊಡು. ಎಷ್ಟು ಮಾತನಾಡುತ್ತೀಯೆ ?

ದ್ಯೂತಕರ:- ತತ್ತೋಽನುಸರಾವ:

ಮಾಥುರ:- ಏವಂ ಭವತು।

(ಉಭೌ ದೇವಕುಲಪ್ರವೇಶಂ ನಿರೂಪಯತ:। ದೃಷ್ಟ್ವಾನ್ಯೋನ್ಯಂ ಸಂಜ್ಞಾಪ್ಯ)

(ಸಂಜ್ಞಾವಚನಂ ಪ್ರತಿಮಾಯಾಂ).

ದ್ಯೂತಕರ:-

ಕಥಂ ಕಾಷ್ಠಮಯೀ ಪ್ರತಿಮಾ।

ಮಾಥುರ:- ಅರೇ ನ ಖಲು ನ ಖಲು ಶೈಲಪ್ರತಿಮಾ (ಇತಿ ಬಹುವಿಧಂ ಚಾಲಯಿತ್ವಾ ಸಂಜ್ಞಾಪ್ಯ ಚ) ಏವಂ ಭವತು ಏಹಿ ದ್ಯೂತಂ ಕ್ರೀಡಾವ:। (ಇತಿ ಬಹುವಿಧಂ ದ್ಯೂತಂ ಕ್ರೀಡತಿ)

ಸಂವಾಹಕ:- (ದ್ಯೂತೇಚ್ಛಾವಿಕಾರ ಸಂವರಣಂ ಬಹುವಿಧಂ ಕೃತ್ವಾ ಸ್ವಗತಂ)

ಅರೇ,

ಕತ್ತಾಶಬ್ದೋ ನಿಸ್ಸಾಣಕಸ್ಯ ಹರತಿ ಹೃದಯಂ ಮನುಷ್ಯಸ್ಯ।
ಢಕ್ಕಾ ಶಬ್ದ ಇವ ನರಾಧಿಪಸ್ಯ ಪ್ರಭ್ರಷ್ಟರಾಜ್ಯಸ್ಯ॥
ಜಾನಾಮಿ ನ ಕ್ರೀಡಿಷ್ಯಾಮಿ ಸುಮೇರುಶಿಖರಪತನಸನ್ನಿಭಂ ದ್ಯೂತಂ।
ತಥಾಪಿ ಕೋಕಿಲಮಧುರ: ಕತ್ತಾಶಬ್ದೋ ಮನೋ ಹರತಿ॥

(ದ್ಯೂತಕರಾಣಾಂ ಮಯಯಾನಾ ಕತ್ತಾ)

ದ್ಯೂತಕರ:- ಮಮ ಪಾಠೇ ಮಮ ಪಾಠೇ।

ಮಾಥುರ:- ನ ಖಲು ಮಮ ಪಾಠೇ ಮಮ ಪಾಠೇ।

ಸಂವಾಹಕ:- (ಅನ್ಯತ: ಸಹಸೋಪಸೃತ್ಯ) ನನು ಮಮ ಪಾಠೇ।

ದ್ಯೂತಕರ:- ಲಬ್ಧ: ಪುರುಷ:

ಮಾಥುರ:- (ಗೃಹೀತ್ವಾ) ಅರೇ ಉತ್ಪಂದಕ, ಗೃಹೀತೋಽಸಿ। ಪ್ರಯಚ್ಛ ತದ್ದಶ ಸುವರ್ಣಂ।

ಸಂವಾಹಕ:- ಅದ್ಯ ದಾಸ್ಯಾಮಿ।

ಮಾಥುರ:- ಅಧುನಾ ಪ್ರಯಚ್ಛ

ಸಂವಾಹಕ:- ದಾಸ್ಯಾಮಿ ಪ್ರಸಾದಂ ಕುರು।

ಮಾಥುರ:- ಅರೇ ನನು ಸಾಂಪ್ರತಂ ಪ್ರಯಚ್ಛ।

ಸಂವಾಹಕ:- ಶಿರ: ಪತತಿ (ಇತಿ ಭೂಮೌ ಪತತಿ)

(ಉಭೌ ಬಹುವಿಧಂ ತಾಡಯತ:)

మాథుర:- ఏష త్వం ఖలు ద్యూతకరమండల్యా బద్ధోఽసి।

సంవాహక:- (ఉత్థాయ సవిషాదం) కథం ద్యూతకరమండల్యా బద్ధోఽస్మి।
కష్టం। ఏషోఽస్మాకం ద్యూతకరాణామలంఘనీయః సమయః
తస్మాత్ కుతో దాస్యామి।

మాథుర:- అరే గండ, క్రియతాం క్రియతాం।

సంవాహక:- ఏవం కరోమి। (ద్యూతకరముపసృత్య) అర్ధం తే
కల్యం దదామి, అర్ధం మే ముంచతు।

ద్యూతకర:- ఏవం భవతు।

సంవాహక:- (సభికముపగమ్య) అర్ధస్య గండం
కరోమి। అర్ధమపి మే ఆర్యో ముంచతు

మాథుర:- కో దోషః। ఏవం భవతు।

సంవాహక:- (ప్రకాశం) ఆర్య అర్ధం త్వయా ముక్తం

మాథుర:- ముక్తం।

సంవాహక:- (ద్యూతకరం ప్రతి) అర్ధం త్వయాపి ముక్తం

ద్యూతకర:- ముక్తం.

సంవాహక:- సాంప్రతం గమిష్యామి।

మాథుర:- ప్రయచ్ఛ తం దశసువర్ణం। కుత్ర గచ్ఛసి।

ಸಂವಾಹಕ–ನನಗೇಕೊ ತಲೆತಿರುಗುವುದು (ಎಂದು ಬೀಳುವನು) (ಸಭಿಕ ಮಾಧುರರು ಹೊಡೆಯುವರು.)

ಮಾಧುರ–ಎಲೋ, ಇನ್ನುಮೇಲೆ ನಿನ್ನನ್ನು ಎಂದಿಗೂ ಜೂಜಿಗೆ ಸೇರಿಸಿಕೊಳ್ಳುವುದಿಲ್ಲ. ನೀನು ಭಂಡ.

ಸಂವಾಹಕ–ಅಯ್ಯಾ! ನಾನು ಭಂಡನಲ್ಲ; ಕೊಡದೇ ಇರುವುದು ಆಟಗಾರರ ಧರ್ಮವಲ್ಲ. 'ಎಲ್ಲಿಂದ ಕೊಡಲಿ'! ಎಂದು ಯೋಚಿಸುತ್ತಿರುವೆನು.

ಮಾಧುರ–ಎಲೋ ತೊತ್ತಿನಮಗನೆ, ಕಂತುಮಾಡಿಕೊಳ್ಳೋ. ಕಂತಿನಪ್ರಕಾರ ಕೊಡೋ.

ಸಂವಾಹಕ–ಹಾಗೆಯೇ ಮಾಡುವೆನು (ಸಭಿಕನ ಸಮೀಪಕ್ಕೆ ಬಂದು) ಅಯ್ಯಾ, ಸಭಿಕನೆ! ಅರ್ಧಹಣವನ್ನು ನಿನ್ನವಶಕ್ಕೆ ಕೊಡುವೆನು, ಇನ್ನರ್ಧವನ್ನು ನನಗೆ ಬಿಟ್ಟುಕೊಡಬೇಕು.

ಸಭಿಕ–ಹಾಗೆಯೇ ಆಗಲಿ, ಸದ್ಯಃ ಅಷ್ಟಾದರೂ ಬಂದರೆ ಸಾಕು.

ಸಂವಾಹಕ–(ಮಾಧುರನೊಡನೆ) ಅಯ್ಯಾ, ಅರ್ಧವನ್ನು ನನಗೆ ನೀನು ಬಿಟ್ಟರೆ ಇನ್ನರ್ಧಕ್ಕೆ ಕಂತುಮಾಡಿಕೊಳ್ಳುವೆನು.

ಮಾಧುರ–ಅದಕ್ಕೇನು ಹಾಗೆಯೇ ಆಗಲಿ.

ಸಂವಾಹಕ– ಅಯ್ಯಾ, ಮಾಧುರನೆ! ನೀನು ಅರ್ಧವನ್ನು ಬಿಟ್ಟೆಯೊ?

ಮಾಧುರ–ಬಿಟ್ಟೆ.

ಸಂವಾಹಕ—ಅಯ್ಯಾ, ನೀನು ಅರ್ಧವನ್ನು ಬಿಟ್ಟೆಯೊ?

ಸಭಿಕ—ಬಿಟ್ಟೆ.

ಸಂವಾಹಕ–ಸ್ವಾಮಿ, ನೀವೆಲ್ಲಾ ಕೇಳಿ. ಇನ್ನು ನಾನು ಹೋಗುವೆನು. (ಹೊರಡಲು ಯತ್ನಿಸುವನು.)

ಮಾಧುರ–ಏನೋ? ಮೆಲ್ಲನೆ ಯುಕ್ತಿತೆಗೆದೆ! ಇದೇನು! ನಿಮ್ಮಪ್ಪ ಹೇಳಿಕೊಟ್ಟುದೋ? ಒಳ್ಳೆಯಮಾತಿನಲ್ಲಿ ಆ ಹತ್ತುವರಹ ಕೊಟ್ಟು ಆಚೆಗೆ ಹೋಗು. ಎಲಾಎಲಾ! ಕಲಿತಗರುಡಿಯಲ್ಲೆ ಸಾಧಕ ತೋರಿಸುವನು!

ಸಂವಾಹಕ—ಅಯ್ಯಾ ಪುಣ್ಯಾತ್ಮರೆ, ನೋಡಿನೋಡಿ. ಇವನು ಅರ್ಧಹಣವನ್ನು ಬಿಟ್ಟು, ಇನ್ನರ್ಧಕ್ಕೆ ಕಂತುಮಾಡಿಕೊಂಡ. ಆದರೂ ಎಲ್ಲಾಹಣವನ್ನೂ ಈಗಲೇ ಕೊಡು ಎಂದು ಕೇಳುವುದು ಯುಕ್ತವೆ?

ಮಾಥುರ—ಎಲೋ, ನಾನು ಯಾರೆಂದು ತಿಳಿದಿದ್ದೀಯೆ? ಮಾಥುರಕಾಣೋ (ಎಂದು ಭುಜವನ್ನು ತಟ್ಟಿಕೊಂಡು) ಮೊದಲು ಕೊಟ್ಟು ಮುಂದೆ ಹೋಗು.

ಸಂವಾಹಕ—ಎಲ್ಲಿಂದ ಕೊಡಲಿ?

ಮಾಥುರ—ಎಲ್ಲಿಂದಕೊಡುವುದೇ? ನಿಮ್ಮಪ್ಪನನ್ನು ಮಾರಿ ಕೊಡು.

ಸಂವಾಹಕ—ನನಗೆ ಅಪ್ಪನೆಲ್ಲಿದ್ದಾನೆ?

ಮಾಥುರ—ಇಲ್ಲದಿದ್ದರೆ ನಿಮ್ಮಮ್ಮನನ್ನು ಮಾರಿ ಕೊಡು?

ಸಂವಾಹಕ—ಅವಳುತಾನೆ ಎಲ್ಲಿದ್ದಾಳೆ?

ಮಾಥುರ—ನೀನಿದ್ದೀಯಲ್ಲಾ. ನಿನ್ನನ್ನೇ ಮಾರಿಕೊಂಡು ಕೊಡು.

ಸಂವಾಹಕ—ಹಾಗೆಯೇ ಆಗಲಿ, ನನ್ನನ್ನು ರಾಜಮಾರ್ಗಕ್ಕೆ ಕರೆದುಕೊಂಡು ಹೋಗಿ.

ಮಾಥುರ—ನಡೆ.

ಸಂವಾಹಕ—ಇದೊ, ಹೊರಟೆ (ಎಂದೆಲ್ಲರೂ ಹೋಗುವರು.)

(ಸ್ಥಾನ—ಬೀದಿ)

ಸಂವಾಹಕ—(ಸಭಿಕ ಮಾಥುರರೊಡನೆ ಪ್ರವೇಶಿಸಿ) ಅಯ್ಯಾ! ಮಹಾತ್ಮರೇ? ಈ ಸಭಿಕನಿಗೆ ನಾನು ಕೊಡಬೇಕಾಗಿರುವ ಹತ್ತುವರಹಗಳನ್ನು ಕೊಟ್ಟು, ಯಾರಾದರೂ ನನ್ನನ್ನು ಕೊಂಡುಕೊಳ್ಳಿ. (ಆಕಾಶವನ್ನು ನೋಡಿ) ಏನು ಏನು? ಹತ್ತುವರಹಗಳನ್ನು ಕೊಟ್ಟು ನಿನ್ನನ್ನು ಕೊಂಡುಕೊಂಡರೆ, ನೀನೇನು ಕೆಲಸಮಾಡುವೆ—ಎಂದು ಕೇಳುವಿರೋ? ನಿಮ್ಮ ಮನೆಯಲ್ಲಿ ನೀವು ಹೇಳಿದ ಕೆಲಸವನ್ನೆಲ್ಲಾ ಮಾಡುವೆನು. (ನೋಡಿ) ಇದೇನು, ಇವನು ಮಾತನಾಡದೆ ಹೊರಟುಹೋದ. ಇರಲಿ, ಮತ್ತೊಬ್ಬನನ್ನು ಕೇಳುವೆನು. (ಮತ್ತೊಂದುಕಡೆ ತಿರುಗಿ ಮೊದಲಿನಂತೆ ಹೇಳಿ) ಇದೇನು! ಇವನೂ ನನ್ನನ್ನು ಲಕ್ಷ್ಯಮಾಡದೆ ಹೊರಟುಹೋ

ಮಾಥುರ — ಸನಾ ದೇಶಿ.

ಸಂವಾಹಕ:— ಶಿತೋ ವಾನ್ಯಾ । (ಇತಿ ಪತತಿ)

(ಮಾಥುರ: ಕರ್ಷತಿ)

ಸಂವಾಹಕ:— ಆರ್ಯ: ಪಶ್ಯಾಮ್ಯಹಂ ಪಶ್ಯಾಮ್ಯಹಂ

(ತತ: ಪ್ರವಿಶತಿ ದರ್ದುರಕ:)

ದರ್ದುರಕ:— ಭೋ:, ದ್ಯೂತಂ ಹಿ ನಾಮ ಪುರುಷಸ್ಯ ಅಸಿಂಹಾಸನಂ ರಾಜ್ಯಂ।

ನ ಗಣಯತಿ ಪರಾಭವಂ ಕುತಶ್ಚಿದ್ಧರತಿ ದದಾತಿ ಚ ನಿತ್ಯಮರ್ಥಜಾತಂ ।
ನೃಪತಿರಿವ ನಿಕಾಮಮಾಯದರ್ಶೀ ವಿಭವವತಾ ಸಮುಪಾಸ್ಯತೇ ಜನೇನ ॥
ಅಪಿ ಚ ।

ದ್ರವ್ಯಂ ಲಬ್ಧಂ ದ್ಯೂತೇನೈವ ದಾರಾ ಮಿತ್ರಂ ದ್ಯೂತೇನೈವ ।
ದತ್ತಂ ಭುಕ್ತಂ ದ್ಯೂತೇನೈವ ಸರ್ವಂ ನಷ್ಟಂ ದ್ಯೂತೇನೈವ ॥
ಅಪಿ ಚ ।

ತ್ರೇತಾಹೃತಸರ್ವಸ್ವ: ಪಾವರಪತನಾಚ್ಚ ಶೋಷಿತಶರೀರ: ।
ನರ್ದಿತದರ್ಶಿತಮಾರ್ಗ: ಕಟೇನ ವಿನಿಪಾತಿತೋ ಯಾಮಿ ॥

ತ್ರೇತಾ = ತ್ರಿ...
ಪಾವರ: = ದು...
ನರ್ದಿತ = ...
ಕಟ = ...

(ಪರದೇಶಿ = ತಪಸ್ವಿ)

ದನು. ಆರ್ಯಚಾರುದತ್ತನಿಗೆ ಸಂಪತ್ತಿದ್ದರೆ ನನಗಿಂತಹ ಕಷ್ಟಬರುತ್ತಿದ್ದಿತೆ? ಇನ್ನೂ ಬದುಕಿರುವೆನಲ್ಲಾ! ನಾನೆಷ್ಟು ನಿರ್ಭಾಗ್ಯ!

ಮಾಥುರ–ಇರಲಿ ಕೊಡೊ.

ಸಂವಾಹಕ–ಎಲ್ಲಿಂದ ಕೊಡಲಿ? (ಎಂದು ಬೀಳುವನು.)

ಮಾಥುರ–(ಎಳೆಯುವನು.)

ಸಂವಾಹಕ–ಆರ್ಯರೇ, ರಕ್ಷಿಸಿ ರಕ್ಷಿಸಿ.

(ದರ್ದುರಕನ ಪ್ರವೇಶ)

ದರ್ದುರಕ–ಅಯ್ಯಾ! ಜೂಜೆಂಬುದು ಪುರಷನಿಗೊಂದು ರಾಜ್ಯವೇಸರಿ. ಆದರೆ ಸಿಂಹಾಸನವಮಾತ್ರವಿಲ್ಲ ದ್ರವ್ಯಸಂಪಾದನೆಯಾಗಬೇಕಾದರೆ ಜೂಜಿನಿಂದಲೇ. ಹೆಂಡತಿ, ಮಕ್ಕಳು, ಮನೆ, ಎಲ್ಲಾ ಜೂಜಿನಿಂದಲೇ. ಕೊಡುವುದೂ ತೆಗೆಯುವುದೂ ಜೂಜಿನಿಂದಲೆ. ಕಡೆಗೆ ಹೆಂಡತಿಯ ತಾಳಿಯನ್ನು ಮಾರಿ, ಮನೆಹಾಳುಮಾಡಿಕೊಂಡು ಹೋಗುವುದೂ ಜೂಜಿನಿಂದಲೇ. ಆಹಾ! ಈ ಹಾಳು ಜೂಜಿಗೆ ಆಸೆಪಟ್ಟು ಹಾಳಾಗುವವರಿಗಿಂತ ಬೇರೆ ಮೂರ್ಖರು ಲೋಕದಲ್ಲುಂಟೆ? ಅವರಿಗೆ ಮಾನ, ಅಪಮಾನವೆನ್ನುವುದು ಇಲ್ಲವೇ ಇಲ್ಲ. ಜೂಜುಗಾರರಲ್ಲಿ ಜಗಳವೆನ್ನುವುದು ಸಿದ್ಧವಾಗಿರುವುದು. ಅಂತಹವರಲ್ಲಿ ನಾನೊಬ್ಬ–ಎಂದು ಹೇಳಿಕೊಳ್ಳಲಾರೆ. (ನೋಡಿ) ನಮ್ಮ ಪೂರ್ವಸಭಿಕನಾದ ಮಾಥುರನು ಇತ್ತಕಡೆಯೇ ಬರುತ್ತಿರುವನು. ಈಗ ನಾನು ತಪ್ಪಿಸಿಕೊಂಡು ಹೋಗುವುದಕ್ಕಾಗುವುದಿಲ್ಲ. ಆದುದರಿಂದ ಅವನಿಗೆ ಕಾಣದಂತೆ ಈ ಬಹಿರ್ವಾಸದಿಂದ ತುಂಬಾ ಮುಸುಕುಹಾಕಿಕೊಳ್ಳುವೆನು. (ಬಹಿರ್ವಾಸವನ್ನು ಬಿಚ್ಚಿ) ಈ ವಸ್ತ್ರವು ಬರಿ ಹರಕು, ಇದನ್ನು ಹೊದೆದುಕೊಳ್ಳುವುದಕ್ಕಾಗುವುದಿಲ್ಲ. ಕಂಕುಳಲ್ಲೇ ಇದ್ದರೆ ಗಂಭೀರ, ಅಥವಾ ಆ ಪರದೇಶಿ! ನನ್ನನ್ನೇನುಮಾಡಿಯಾನು.

ಮಾಥುರ–ನನ್ನ ಹಣವನ್ನು ಯಾರಕೈಯ್ಯಲ್ಲಿ ಕೊಡಿಸುವೆಯೋ ಕೊಡಿಸು.

ಸಂವಾಹಕ–ಯಾರಿಂದ ಕೊಡಿಸಲಿ?

ಮಾಥುರ–(ಎಳೆಯುವನು).

ಸಂವಾಹಕ–ಅಯ್ಯೋ! ಈ ಮಾಥುರನು ನನ್ನನ್ನು ಎಳೆಯುತ್ತಾನೆ, ಯಾರೂ ಬಿಡಿಸುವವರೇ ಇಲ್ಲವಲ್ಲಾ (ಎಂದು ಗೋಳಾಡುವನು.)

ದರ್ದುರಕ–ಇದೇನು ಮುಂದೆ ಜನದ ಕೋಲಾಹಲ? ಏನೆಂದೆ, ಈ ಮಾಥುರನು ನನ್ನ ಮಾನವನ್ನು ಕಳೆಯುತ್ತಾನೆ. ನನ್ನನ್ನು ಯಾರೂ ಬಿಡಿಸುವವರೇ ಇಲ್ಲವಲ್ಲ ಎಂದು ಹೇಳುವೆಯೋ? ಹೆದರಬೇಡ ಹೆದರಬೇಡ, ಈ ದರ್ದುರಕನು ನಿನ್ನನ್ನು ಬಿಡಿಸುವನು. (ಸಮೀಪಕ್ಕೆ ಬಂದು) ಓಹೋ! ಇವನು ದುಷ್ಟನಾದ ಮಾಥುರ, ಇವನು ಬಡಪಾಯಿಯಾದ ಸಂವಾಹಕ. ಇರಲಿ; ಸಮಾಧಾನಪಡಿಸುವೆನು (ಎಂದು ಸಮೀಪಕ್ಕೆ ಬಂದು) ಮಾಥುರನೆ, ನಮಸ್ಕಾರ.

ಮಾಥುರ–ಒಂದಕ್ಕೆ ಸಾವಿರ.

ದರ್ದುರಕ–ಇದೇನಿದು?

ಮಾಥುರ–ಈ ಸಂವಾಹಕನು ನನಗೆ ಹತ್ತು ವರಹಗಳನ್ನು ಕೊಡಬೇಕು.

ದರ್ದುರಕ–ಅಯ್ಯೋ! ಇಷ್ಟೇನೆ! ಗೋಪಾಳ!

ಮಾಥುರ–(ದರ್ದುರಕನ ಕಂಕುಳಲ್ಲಿದ್ದ ವಸ್ತ್ರವನ್ನೆಳೆದು) ಅಯ್ಯಾ, ನೋಡಿ ನೋಡಿ; ಬಟ್ಟೆಗೆ ಗತಿಯಿಲ್ಲದೆ ಜೂಲುಬಟ್ಟೆಯನ್ನು ಹೊದೆದುಕೊಂಡಿರುವ ಇವನಿಗೆ ಹತ್ತು ವರಹಗಳು ಗೋಪಾಳವಂತೆ!

ದರ್ದುರಕ—ಎಲೋ ಮೂರ್ಖ! ಒಂದಾಟಹೊಡೆದು ನಿನ್ನ ಹತ್ತು ವರಹಗಳನ್ನು ಬಿಸಾಡುವೆನು. ದುಡ್ಡಿಟ್ಟುಕೊಂಡಿರುವವನು ಕೈಯಲ್ಲೇ ಗಂಟುಕಟ್ಟಿಕೊಂಡಿದ್ದು ತೋರಿಸುವನೋ? ಈ ಹತ್ತು ವರಹಗಳಿಗೋಸ್ಕರ ಒಬ್ಬ ಮನುಷ್ಯನನ್ನು ಕೊಲ್ಲುವೆಯೊ?

ಮಾಥುರ–ಅಯ್ಯಾ, ಈ ಹತ್ತು ವರಹ ನಿನಗೆ ಸ್ವಲ್ಪ, ನನಗೆ ಅದೇ ದೊಡ್ಡದು.

ದರ್ದುರಕ–ಹಾಗಾದರೆ ನನ್ನಮಾತನ್ನು ಕೇಳು, ಬೇರೆ ಇನ್ನು ಹತ್ತು ವರಹಗಳನ್ನು ಇವನಿಗೆ ಕೊಡು.

ಮಾಥುರ—ಕೊಟ್ಟರೇನು?

ದುರ್ದರಕಃ:- ಪಿತಾ ತೇ ಖಂಡಿತವ್ಯಃ (ಸಂವಾಹಕಸ್ಯ ಪಕ್ಷಮುಖಂ ಸಂಜ್ಞಾಂ ದದಾತಿ)

1 ಮಾಥುರಃ:- (ಮಾಥುರಃ ಸಂವಾಹಕಮುತ್ಸೃಜ್ಯ ಪ್ರೇ(ಕ್ಷ್ಯ) ಮುಷ್ಟಿಪ್ರಹಾರಂ ದದಾತಿ। ಸಂವಾಹಕಃ ನಿರ್ಗಚ್ಛನ್ ಮೂರ್ಛಾಂ ನಾಟಯನ್ ಭೂಮೌ ಪತತಿ। ದುರ್ದರಕಃ ವಿಪ್ರತ್ಯಂತರಯತಿ। ಮಾಥುರೋ ದುರ್ದರಕಂ ತಾಡಯತಿ। ದುರ್ದರಕೋಽಪಿ ಪ್ರತಿತಾಡಯತಿ।)

ಮಾಥುರಃ:- ಅರೆ ಅರೆ ದುಷ್ಟ ಶೃಂಗಾಲಪುತ್ರಕ, ಪಲಾಯಸಿ ವ್ಯಾಪತ್ಸ್ಯಸಿ।

ದರ್ದುರಕ—ಇವನು ಆಡಿ ಗೆದ್ದರೆ ನಿನ್ನ ಹಣವನ್ನು ನಿನಗೆ ಕೊಟ್ಟೇ ಕೊಡುವನು.

ಮಾಧುರ—ಒಂದುವೇಳೆ ಗೆಲ್ಲದಿದ್ದರೆ ?

ದರ್ದುರಕ—ಹಣವೇ ಇಲ್ಲ.

ಮಾಧುರ—ಎಲೋ ನೀಚ ! ಇಷ್ಟೆಲ್ಲಾ ಹೇಳುವೆಯಲ್ಲಾ ? ನೀನೆ ಕೊಡೋ. ಅರೆಕಾಸಿಗೆ ಗತಿಯಿಲ್ಲದ ನೀನು ಬಾಯಿಗೆಬಂದಹಾಗೆ ಹರಟುವೆ.

ದರ್ದುರಕ—ಎಲೋ ಯಾರೋ ? ನೀಚ !

ಮಾಧುರ—ನೀನೇ, ಇನ್ನಾರು.

ದರ್ದುರಕ—ನಾನಲ್ಲ, ನಿಮ್ಮಪ್ಪ ಕಾಣೋ.

ಮಾಧುರ—(ಕೋಪದಿಂದ) ಸೂಳೆಯಮಗನೆ, ನೀನು ಹೀಗೆಯೊ ಜೂಜಾಡುವುದು ?

ದರ್ದುರಕ ಅಹುದು, ನಾನಾಡುವುದು ಹೀಗೆಯೆ. ನೀನಾರೋ ಕೇಳುವುದಕ್ಕೆ.

ಮಾಧುರ—ಎಲೋ, ಸಂವಾಹಕ ! ಹಣಕೊಡು.

ಸಂವಾಹಕ—ಕೊಡುವೆನು.

ಮಾಧುರ—(ಸಂವಾಹಕನನ್ನು ಎಳೆಯುವನು.)

ದರ್ದುರಕ—ಎಲೋ ಮೂರ್ಖ, ನಾನಿಲ್ಲದಿದ್ದರೆ ನೀನು ಏನಾದರೂ ಮಾಡಬಹುದಾಗಿದ್ದಿತು. ನನ್ನಿದಿರಾಗಿ ಹೀಗೆಲ್ಲಾ ಮಾಡಿದರೆ ನಾನು ಸುಮ್ಮನಿರುವೆನೆ ?

1 ಮಾಧುರ—(ಸಂವಾಹಕನ ಮೂಗಿನಮೇಲೆ ಗುದ್ದುವನು.)

ಸಂವಾಹಕ—(ರಕ್ತವನ್ನು ಕಾರುತ್ತ ಜ್ಞಾನತಪ್ಪಿ ನೆಲದಮೇಲೆ ಬೀಳುವನು.)

ದರ್ದುರಕ—(ಬೇಗಬಂದು ಬಿಡಿಸುವನು, ಮಾಧುರನು ದರ್ದುರಕನನ್ನು ಹೊಡೆಯುವನು.)

ದರ್ದುರಕ—(ಮಾಧುರನನ್ನು ಹೊಡೆಯುವನು.)

ಮಾಧುರ—ಎಲೋ ದುಷ್ಟ ! ಇದಕ್ಕೆ ತಕ್ಕ ಫಲವನ್ನು ಅನುಭವಿಸುವೆ.

ದರ್ದುರಕ—ಎಲೋ ಮೂರ್ಖ, ನನ್ನನ್ನು ಬೀದಿಯಲ್ಲಿ ಹೊಡೆದೆ. ನಾಳೆ ಬೆಳಕುಹರಿದರೆ ನಾನು ನಿನ್ನನ್ನು ನ್ಯಾಯಾಸ್ಥಾನದಲ್ಲಿ ಹೊಡೆಯುವೆನು. ನೋಡುವೆಯಂತೆ.

ಮಾಥುರ—ಇರಲಿ, ಹೋಗು, ನಾನೂ ನೋಡುವೆನು.

ದರ್ದುರಕ—ನೀನು ಹೇಗೆ ನೋಡುವೆಯೋ ನೋಡೋಣ. ಪೂರ್ವೋತ್ತರ ಮುಂದಿದೆ.

ಮಾಥುರ—(ಕಣ್ಣುಗಳನ್ನು ಚೆನ್ನಾಗಿ ತೆರೆದು) ಇದೊ, ಹೀಗೆ ನೋಡುವೆನು.

ದರ್ದುರಕ—(ಮಾಥುರನ ಕಣ್ಣಿಗೆ ಮಣ್ಣೆರಚಿ, ಓಡಿಹೋಗೆಂದು ಸಂವಾಹಕನಿಗೆ ಸನ್ನೆಮಾಡುವನು.)

ಮಾಥುರ—(ಕಣ್ಣುಗಳನ್ನು ಮುಚ್ಚಿಕೊಂಡು) ಅಹಾ! (ಎಂದು ಕೆಳಕ್ಕೆ ಬೀಳುವನು.

ಸಂವಾಹಕ—(ಓಡಿಹೋಗುತ್ತ) ಇಲ್ಲಿ ಯಾವುದೋ ಒಂದು ಮನೆ ಇರುವುದು. ಈ ದಿಡ್ಡಿಯಬಾಗಿಲಿನಿಂದ ಒಳಕ್ಕೆಹೋಗಿ ಅಪಿತು ಕೊಳ್ಳುವೆನು.

ದರ್ದುರಕ—(ಸ್ವಗತ) ಪ್ರಧಾನಸಭಿಕನಾದ ಮಾಥುರನಲ್ಲಿ ದ್ವೇಷ ಮಾಡಿಕೊಂಡು ಇನ್ನಿಲ್ಲಿರುವುದು ಸರಿಯಲ್ಲ. ಆರ್ಯಕನೆಂಬ ಗೊಲ್ಲರ ಹುಡುಗನು ದೊರೆಯಾಗುವನೆಂಬುದಾಗಿ ಒಬ್ಬ ಸಿದ್ಧಪುರುಷನು ಹೇಳಿದನೆಂದು ನನಗೆ ಪ್ರಿಯಮಿತ್ರನಾದ ಶರ್ವಿಳಕನು ಹೇಳಿದ್ದನು. ನಮ್ಮಂತಹರೆಲ್ಲರೂ ಆರ್ಯಕನನ್ನೇ ಆಶ್ರಯಿಸುತ್ತಿರುವುದರಿಂದ ನಾನೂ ಆತನ ಸಮೀಪಕ್ಕೆ ಹೋಗುವೆನು (ಎಂದು ಹೋಗುವನು.)

ಮಾಥುರ—(ಕಣ್ಣೊರಸಿಕೊಂಡು) ಎಲೋ! ಕೊಡು ಕೊಡು.

ಸಭಿಕ—ನಾವು ದರ್ದುರಕನೊಡನೆ ಜಗಳವಾಡುತ್ತಿದ್ದಾಗ, ಸಂವಾಹಕನೆಲ್ಲೋ ತಪ್ಪಿಸಿಕೊಂಡು ಓಡಿಹೋದನು.

ಮಾಥುರ—ನಾನು ಆ ಸಂವಾಹಕನ ಮೂಗಿನಮೇಲೆ ರಕ್ತ ಸುರಿಯುವಂತೆ ಹೊಡೆದೆ. ಇದೊ, ನೋಡು ರಕ್ತವನ್ನು ಸುರಿಸಿಕೊಂಡು ಹೋಗಿರುವನು. ನಾವು ಇದೇ ಮಾರ್ಗದಲ್ಲಿ ಹೋಗಿ ಹಿಡಿಯೋಣ.

ಸಭಿಕ—ಎಲೋ, ಆ ಸಂವಾಹಕನು ವಸಂತಸೇನೆಯ ಮನೆಗೆ ಹೋಗಿರಬಹುದು.

ಮಾಧುರ—ಇನ್ನು ನಮ್ಮ ಹಣ ಬಂದಂತೆಯೇ ಆಯಿತು.

ಸಭಿಕ—ನ್ಯಾಯಾಸ್ಥಾನಕ್ಕೆ ಹೋಗಿ ಹೇಳೋಣ.

ಮಾಧುರ—ಬೇಡ ಬೇಡ, ನಾವು ಅಲ್ಲಿಗೆ ಹೋದರೆ ಇವನೆಲ್ಲಾದರೂ, ತಪ್ಪಿಸಿಕೊಂಡು ಓಡಿಹೋದಾನು. ಇಲ್ಲಿಯೇ ಕಾದುಕೊಂಡಿದ್ದು ಹಿಡಿಯೋಣ.

(ಸ್ಥಾನ—ವಸಂತಸೇನೆಯ ಮನೆ)

(ವಸಂತಸೇನೆ ಮದನಿಕೆಯೊಡನೆ ಪ್ರವೇಶ.)

ವಸಂತಸೇನೆ—

॥ ರಾಗ ॥

ಸಖಿಯೇಗ್ಯೆವೆನೀಗಕ್ಕಟಾ ॥ ಸುಖಮಿಂತಾಗೆ ನಾಂ ಸೈಪೆನೆ ॥ ಪ ॥
ಮಲಗೆ ನಿದ್ರೆಯೆಬಾರದು । ಕಲಕಿತಂಗವ ಬೇಸರ ।
ಚಲವೇಕಿಂತು ಪೇಳೆನ್ನೊಳು ॥ ೧ ॥
ಮನದನ್ನನೆನ್ನೀಪರಿ । ಕನಸಿನಲ್ಲಿಯುಕಾಣದೆ ।
ಮನವಾಂತಿರ್ಪ ಸಂತೋಷಕೆ ॥ ೨ ॥

ಎಲೆ ಸಖಿ, ಆಮೇಲಾಮೇಲೆ.

ಮದನಿಕೆ—ಆರ್ಯಳೆ, ಏನೂ ಮಾತನಾಡಲಿಲ್ಲವಲ್ಲಾ! ಆಮೇಲಾಮೇಲೆ ಎಂದೇಕೆ ಕೇಳುವೆ?

ವಸಂತಸೇನೆ—ಈಗ ನಾನು ಏನೆಂದೆ?

ಮದುನಿಕೆ—ಆಮೇಲೆ, ಆಮೇಲೆ ಎಂದೆ.

ವಸಂತಸೇನೆ ಅಹುದು.

ಚೇಟಿ—(ಪ್ರವೇಶಿಸಿ) ವಸಂತಸೇನೆಯೆ, ನೀನು ಬೇಗ ಸ್ನಾನ ಮಾಡಿ ದೇವರಪೂಜೆಯನ್ನು ಬೇಗನೆ ತೀರಿಸಬೇಕೆಂದು ನಿಮ್ಮ ತಾಯಿಯು ಅಪ್ಪಣೆ ಕೊಟ್ಟಿರುವಳು.

ವಸಂತಸೇನೆ—ಎಲೆ ಚೇಟಿ, ಈಗ ನಾನು ಸ್ನಾನಮಾಡುವುದಿಲ್ಲ. ಆದುದರಿಂದ ಬ್ರಾಹ್ಮಣನಿಂದಲೇ ಪೂಜೆಮಾಡಿಸೆಂದು ನಮ್ಮ ತಾಯಿಗೆ ವಿಜ್ಞಾಪಿಸು.

ಚೇಟಿ—ಅಪ್ಪಣೆ (ಎಂದು ಹೋಗುವಳು.)

ಮದನಿಕೆ—ಆರ್ಯಳೆ, ನಾನು ನಿನ್ನನ್ನು ಆಕ್ಷೇಪಿಸುವುದಲ್ಲ, ವಿಶ್ವಾಸದಿಂದ ಕೇಳುವೆನು. ಇದೇನು ನಿನ್ನ ರೀತಿಯೇ ಬೇರೆ ವಿಧವಾಗಿ ಕಾಣುವುದು ?

ವಸಂತಸೇನೆ—ನಾನು ಹೇಗೆ ಕಾಣುವೆನು ?

ಮದನಿಕೆ—ಮನಸ್ಸಿನಲ್ಲಿ ಏನನ್ನೋ ಚಿಂತಿಸುತ್ತಿರುವಂತೆ ಕಾಣುವೆ.

ವಸಂತಸೇನೆ—ನೀನು ಚೆನ್ನಾಗಿ ಊಹಿಸಿದೆ. ನೀನು ಪರಹೃದಯಗ್ರಹಣಪಂಡಿತೆಯಾದ ಮದನಿಕೆಯಲ್ಲವೇ ?

ಮದನಿಕೆ—ಆರ್ಯಳೆ, ನೀನು ಈಗ ಯಾರನ್ನು ಕುರಿತು ಚಿಂತಿಸುವೆ ? ಬ್ರಾಹ್ಮಣನನ್ನೋ, ರಾಜನನ್ನೋ ?

ವಸಂತಸೇನೆ—ಯಾರನ್ನೂ ಅಲ್ಲ, ನನ್ನ ಸಂಗಡ ನೀನು ಮದನೋದ್ಯಾನಕ್ಕೆ ಬಂದಿರಲಿಲ್ಲವೆ ?

ಮದನಿಕೆ—ಬಂದಿದ್ದೆ.

ವಸಂತಸೇನೆ—ಆದರೆ ಕಾಣದವಳಂತೆ ನನ್ನನ್ನೇಕೆ ಕೇಳುವೆ ?

ಮದನಿಕೆ—ತಿಳಿಯಿತು, ತಿಳಿಯಿತು. ನೀನು ಶರಣಾಗತೆಯಾದಾಗ ನಿನಗೆ ಅನುಗ್ರಹಮಾಡಿದನಷ್ಟೆ ? ಆತನನ್ನೆಯೋ ?

ವಸಂತಸೇನೆ—ಆತನ ಹೆಸರೇನು ಹೇಳು.

ಮದನಿಕೆ—ಆತನು ವರ್ತಕರಬೀದಿಯಲ್ಲಿ ವಾಸಮಾಡುತ್ತಿರುವನು.

ವಸಂತಸೇನೆ—ನಾನು ಆತನ ವಾಸಸ್ಥಾನವನ್ನು ಕೇಳಲಿಲ್ಲ. ಹೆಸರನ್ನು ಕೇಳಿದೆನು.

ಮದನಿಕೆ—ಆತನ ಹೆಸರು ಚಾರುದತ್ತನೆಂದು.

ವಸಂತಸೇನೆ—ಭಾಪು ! ಮದನಿಕೆ, ಭಾಪು ! ನೀನು ಚೆನ್ನಾಗಿ ತಿಳಿದೆ.

ಮದನಿಕೆ—ಆತನು ಬಹು ದರಿದ್ರನೆಂದು ಹೇಳುವರಲ್ಲಾ.

ವಸಂತಸೇನೆ—ಆದುದರಿಂದಲೆ ನಾನು ಆತನನ್ನು ಬಿಡದೆ ಇರುವುದು. ಲೋಕದಲ್ಲಿ ಬಡವನಲ್ಲಿ ಅನುರಕ್ತೆಯಾದ ಸೂಳೆಗೆ ಅಪವಾದ ಬರುವುದಿಲ್ಲ.

ಮದನಿಕೆ—ಆರ್ಯೆ, ಇದೇನು ಹೀಗೆ ಹೇಳುವೆ ? ಹೂವಿಲ್ಲದಿರುವ ಮಾವಿನ ಮರವನ್ನು ಮಧುಪಗಳು ಸೇವಿಸುವುದುಂಟೆ ?

ವಸಂತಸೇನೆ—ಆದುದರಿಂದಲೇ ಅವಕ್ಕೆ ಮಧುಪಗಳೆಂದು ಹೆಸರು.

ಮದನಿಕೆ—ಮಧುಪಗಳೆಂದರೆ ಮಧ್ಯಪಾಯಿಗಳೆಂದೋ ? ಆದರೆ ನೀನು ಆತನಬಳಿಗೇಕೆ ಹೋಗುವುದಿಲ್ಲ ?

ವಸಂತಸೇನೆ—ಈಗ ಆತನು ನನಗೆ ಪ್ರತ್ಯುಪಕಾರಮಾಡಲು ಅಸಮರ್ಥನಾಗಿರುವುದರಿಂದ ನನ್ನನ್ನು ಕಂಡರೆ ಸಂಕೋಚಪಡುವನಲ್ಲಾ ಎಂದು ಹೋಗದೆ ಇರುವೆನು.

ಮದನಿಕೆ—ಆದುದರಿಂದಲೆಯೋ ನೀನು ಆತನ ವಶಕ್ಕೆ ಒಡವೆಗಳನ್ನು ಕೊಟ್ಟು ಬಂದುದು.

ವಸಂತಸೇನೆ—ಸಖಿ, ಮುಖ್ಯತತ್ವವನ್ನೇ ಹೇಳಿದೆ.

(ತೆರೆಯಲ್ಲಿ) ಅಯ್ಯಾ, ಯಜಮಾನ, ನೋಡು ನೋಡು, ಜೂಜಾಡಿ ಹತ್ತುವರಹಗಳನ್ನು ಸೋತು, ಕೊಡದೆ ಮೋಸದಿಂದ ಓಡಿಹೋಗುತ್ತಿರುವನು. ಹಿಡಿದುಕೊ ! ಹಿಡಿದುಕೊ ! ಎಲೋ ಓಡಿಹೋಗುವೆಯಾ ? ನಿಲ್ಲು ನಿಲ್ಲು.

ವಸಂತಸೇನೆ—(ಭಯದಿಂದ) ಎಲೆ ಸಖಿ, ಇದೇನು ಕೋಲಾಹಲ ? (ಎಂದು ಹೋಗುವರು.)

ಸಂವಾಹಕ—(ಓಡಿಬಂದು—ವಸಂತಸೇನೆಯು ಮದನಿಕೆಯೊಡನೆ ಕುಳಿತಿರುವುದನ್ನು ನೋಡಿ) ಆರ್ಯೆ, ಶರಣಾಗತನಾಗಿರುವೆನು.

ವಸಂತಸೇನೆ—ಹೆದರಬೇಡ ಹೆದರಬೇಡ. (ಮದನಿಕೆಗೆ ಸನ್ನೆ ಮಾಡುವಳು.)

ಮದನಿಕೆ—ಆರ್ಯನೆ, ನೀನು ಯಾರು ? ಎಲ್ಲಿಂದ ಬಂದೆ ? ನಿನ್ನ ವೃತ್ತಿಯೇನು ? ಯಾರಿಗೆ ಹೆದರಿಕೊಂಡು ಹೀಗೆ ಓಡಿಬಂದೆ ?

ಸಂವಾಹಕ—ಆರ್ಯೆ ಕೇಳು :—ಪಾಟಲೀಪುರದಲ್ಲಿ ನಾನು ಜನಿಸಿದೆನು. ನನ್ನದು ವೈತಾಳಿಕಜಾತಿ. ಕಾಲೊತ್ತುವುದೇ ನನ್ನ ವೃತ್ತಿ.

ವಸಂತಸೇನೆ—ಆಃ! ಸರ್ವೋತ್ತಮವಾದ ವೃತ್ತಿಯನ್ನೇ ಅನುಸರಿಸಿರುವೆ ?

ಸಂವಾಹಕ—ಆರ್ಯೆ, ಅದೊಂದು ವಿದ್ಯೆಯೆಂದು ಭಾವಿಸಿ ಕಲಿತೆನು. ಅದೇ ಜೀವನಕ್ಕೆ ಉಪಯೋಗಿಸಿತು.

ಮದನಿಕೆ—ಆರ್ಯನೆ, ಬಲು ಚೆನ್ನಾಗಿ ಪ್ರತ್ಯುತ್ತರವನ್ನು ಹೇಳಿದೆ. ಆಮೇಲಾಮೇಲೆ ?

ಸಂವಾಹಕ—ಆಮೇಲೆ ಈ ದೇಶವು ಬಲುಚೆನ್ನಾಗಿರುವುದೆಂದು ಕೇಳಿ, ನೋಡಬೇಕೆಂಬ ಅಭಿಲಾಷೆಯಿಂದ ಇಲ್ಲಿಗೆಬಂದು, ಈ ಉಜ್ಜಯಿನೀ ಪಟ್ಟಣದಲ್ಲಿ ಒಬ್ಬನ ಸೇವೆಯನ್ನು ಮಾಡಿಕೊಂಡಿದ್ದೆನು. ಆತನು ಮಹಾತ್ಮನು. ಜನರಿಗೆ ಉಪಕಾರವನ್ನೇ ಮಾಡತಕ್ಕವನು. ಪರರಿಗೆ ಮಾಡಿದ ಉಪಕಾರವನ್ನು ಬಾಯಿಂದಲೂ ಹೇಳತಕ್ಕವನಲ್ಲ.

ಮದನಿಕೆ—ಆರ್ಯೆ, ಈ ಉಜ್ಜಯಿನೀಪಟ್ಟಣದಲ್ಲಿ ಇಷ್ಟು ಗುಣವಂತನಾದ ಪುರುಷನಾವನಿರುವನು ?

ವಸಂತಸೇನೆ—ಭಾಪು ! ಮದನಿಕೆ, ಭಾಪು ! ನಾನೂ ಮನಸ್ಸಿನಲ್ಲಿ ಅದನ್ನೇ ಯೋಚಿಸುತ್ತಿದ್ದೆನು.

ಮದನಿಕೆ—ಆಮೇಲಾಮೇಲೆ ?

ಸಂವಾಹಕ—ಆರ್ಯೆ, ಆತನು ಕೇವಲ ದಯೆಯಿಂದ ತನ್ನಲ್ಲಿದ್ದ ದ್ರವ್ಯವನ್ನು ಎಲ್ಲರಿಗೂ ಕೊಟ್ಟು ಕೊಟ್ಟೂ--

ವಸಂತಸೇನೆ—ಏನು ಸಂಪತ್ತೆಲ್ಲಾ ಹೋಯಿತೆ ?

ಸಂವಾಹಕ—ಆರ್ಯೆ, ನಾನು ಹೇಳುವುದಕ್ಕೆ ಮೊದಲೇ ನಿನಗೆ ಹೇಗೆ ತಿಳಿಯಿತು ?

ವಸಂತಸೇನೆ—ಮುಖ್ಯವಾಗಿ ಐಶ್ವರ್ಯಸುಗುಣಗಳು ಒಂದೆಡೆಯಲ್ಲಿ ಇರುವುದಿಲ್ಲ. ಉಪ್ಪುನೀರಿನಕೆರೆಯು ಬೇಗ ಒಣಗಿಹೋಗುವುದಿಲ್ಲವಷ್ಟೆ ?

ಮದನಿಕೆ—ಆರ್ಯನೆ, ಆತನ ಹೆಸರೇನು ?

ಸಂವಾಹಕ—ಆರ್ಯೆ, ಭೂಮಿಯಲ್ಲಿ ಚಂದ್ರನಂತೆ ಪ್ರಕಾಶಿಸುತ್ತಿರುವ ಆತನ ಹೆಸರನ್ನು ಯಾರುತಾನೆ ಅರಿಯರು ? ವರ್ತಕರ ಬೀದಿಯಲ್ಲಿ ವಾಸಮಾಡುವ ಆತನ ಹೆಸರು ಆರ್ಯ ಚಾರುದತ್ತನೆಂದು.

ವಸಂತಸೇನೆ—(ಸಂತೋಷದಿಂದೆದ್ದು) ಆರ್ಯನೆ, ಇದೂ ನಿನ್ನ ಮನೆಯೇ. ಮದನಿಕೆ, ಈತನಿಗೆ ಪೀಠವನ್ನು ತಂದು ಹಾಕು. ಬೀಸಣಿಗೆಯನ್ನು ತಂದು ಬೀಸು. ಬಹಳ ಶ್ರಮಪಟ್ಟಿರುವನು.

ಮದನಿಕೆ—(ಪೀಠವನ್ನು ಹಾಕುವಳು.) (ಚೇಟೀ ತಥಾ ಕರೋತಿ)

ಸಂವಾಹಕ—(ಸ್ವಗತ) ಇದೇನು ನಾನು ಆ ಚಾರುದತ್ತನ ಹೆಸರನ್ನು ಹೇಳಿದ ಮಾತ್ರದಿಂದಲೇ ಈಕೆಯು ನನ್ನನ್ನು ಇಷ್ಟು ಆದರಿಸುವಳು. ಭಾಪು! ಆರ್ಯ ಚಾರುದತ್ತನೇ, ಭಾಪು! ಭೂಮಿಯಲ್ಲಿ ನೀನು ಬದುಕಿರುವುದು ಸಾರ್ಥಕ. ಇತರರು ಬದುಕಿದ್ದರೂ ಇಲ್ಲದಹಾಗೆಯೇ ಸರಿ. (ಪ್ರಕಾಶ) ಆರ್ಯೆ, ಪೀಠದಮೇಲೆ ಕುಳಿತುಕೊ.

ವಸಂತಸೇನೆ—(ಕುಳಿತು) ಆಮೇಲಾಮೇಲೆ ?

ಸಂವಾಹಕ—ಆಮೇಲೆ ನಾನು ಆತನ ಪಾದಸೇವೆಯನ್ನು ಮಾಡಿಕೊಂಡಿದ್ದೆನು. ಈ ದಿನ ಜೂಜಿನಲ್ಲಿ ನನ್ನ ಗ್ರಹಚಾರವಶದಿಂದ ಹತ್ತು ವರಹಗಳನ್ನು ಸೋತೆನು.

ಮಾಥುರ—(ತೆರೆಯಲ್ಲಿ) ನನಗೆ ಮೋಸಮಾಡಿದನು. ನಾನು ಕೆಟ್ಟೆನು.

ಸಂವಾಹಕ—(ಕೇಳಿ) ಆರ್ಯೆ, ಸಭಿಕನೂ ದ್ಯೂತಕನೂ ನನ್ನನ್ನು ಹುಡುಕಿಕೊಂಡು ಬಂದಿರುವರು. ಇನ್ನೇನು ಮಾಡಬೇಕೋ ನನಗೆ ತಿಳಿಯದು. ನೀನೇ ರಕ್ಷಿಸಬೇಕು.

ವಸಂತಸೇನೆ—ಮದನಿಕೆ. ಈಗ ಸಾಯಂಕಾಲವಾಗುತ್ತಾ ಬಂತು. ಆದುದರಿಂದ, ಜಾಗ್ರತೆಯಾಗಿ ಹೋಗಿ ಸಂವಾಹಕನೇ ಕೊಟ್ಟನೆಂದು ಹೇಳಿ ಈ ಹಸ್ತಾಭರಣವನ್ನು ಆ ಸಭಿಕದ್ಯೂತಕರ ವಶಕ್ಕೆ ಕೊಟ್ಟು ಬಾ. (ಕೊಡುವಳು.) (ಮದನಿಕೆ ತೆಗೆದುಕೊಂಡು ಹೋಗುವಳು.)

ಮಾಥುರ—(ತೆರೆಯಲ್ಲಿ) ನನಗೆ ಮೋಸಮಾಡಿದ! ನಾನು ಮುಳುಗಿದೆನು.

ಮದನಿಕೆ—(ಬಂದು) ಆರ್ಯೆ, ಕೊಟ್ಟುಬಂದೆನು.

ವಸಂತಸೇನೆ—ಅವರು ಏನುಹೇಳಿದರು?

ಮದನಿಕೆ—ನಮಗೆ ನಿನ್ನ ಹಣ ಬಂತು. ಪುನಃ ಜೂಜಾಡುವುದಕ್ಕೆ ಬರಬಹುದು. ಎಂದು ಹೇಳಿದರು.

ಸಂವಾಹಕ—ನಮೋನಮಃ. ಜನ್ಮಜನ್ಮಾಂತರಕ್ಕೂ ಅವರ ಸಹವಾಸವೇ ಬೇಡ. ಆ ಹಾಳು ಜೂಜಾಟವನ್ನು ಕಣ್ಣಿನಿಂದ ನೋಡ

ದಿದ್ದರೆ ಸಾಕು. ನನಗೆ ತುಂಬಾ ಅನುಭವವಾಗಿದೆ. ಮತ್ತೆ ಜೂಜಿಗೆ ಸೇರುವವನಿಗಿಂತ ಅವಿವೇಕಿಗಳು ಯಾರೂ ಇಲ್ಲ. ಚೆನ್ನಾಗಿ ಬುದ್ಧಿ ಬಂತು.

ಮದನಿಕೆ—ಆರ್ಯನೆ, ಇನ್ನು ಧೈರ್ಯವಾಗಿ ನಿನ್ನ ಮನೆಗೆ ಹೋಗು.

ಸಂವಾಹಕ—ಆರ್ಯೆ, ನಾನು ನಿನ್ನನ್ನು ಸೇವಿಸಿಕೊಂಡು ಇಲ್ಲಿಯೇ ಇರುವೆನು.

ವಸಂತಸೇನೆ—ನೀನು ಈವರೆಗೆ ಎಲ್ಲಿದ್ದೆಯೋ, ಅಲ್ಲಿಯೇ ಆತ ನನ್ನೇ ಸೇವಿಸಿಕೊಂಡಿರುವುದು ಯುಕ್ತ.

ಸಂವಾಹಕ—(ಸ್ವಗತ) ಈಕೆಯು ಮೆಲ್ಲಗೆ ತಪ್ಪಿಸಿಕೊಂಡಳು. ಈಕೆಗೆ ಹೇಗೆ ಪ್ರತ್ಯುಪಕಾರಮಾಡಲಿ? (ಪ್ರಕಾಶ) ಆರ್ಯೆ, ಈ ಸಭಿಕನು ನನಗೆ ಮಾಡಿದ ಅಪಮಾನಕ್ಕಾಗಿ, ನಾನು ಜೈನಸನ್ಯಾಸಿಯಾಗುವೆನು. ಆದರೆ ಸಂವಾಹಕನೆಂಬ ಒಬ್ಬ ಜೂಜಾಡುವವನಿದ್ದನು. ಅವನು ಜೈನಸನ್ಯಾಸಿಯಾದನು. ಎಂದು ನನ್ನ ಸ್ಮರಣೆಯಾದರೂ ನಿನಗಿರಲಿ.

ವಸಂತಸೇನೆ—ಆರ್ಯನೆ, ಅಂತಹ ಸಾಹಸಕಾರ್ಯವನ್ನು ಮಾತ್ರ ಮಾಡಬೇಡ.

ಸಂವಾಹಕ—ಇಲ್ಲ ಇಲ್ಲ. ನಿಶ್ಚಯಿಸಿಬಿಟ್ಟಿರುವೆನು. (ಎಂದು ಹೊರಟು) ಇದುವರಿಗೆ ಜೂಜು ಜನರಿದಿರಾಗಿ ನನ್ನನ್ನು ತಲೆತಗ್ಗಿಸುವಂತೆ ಮಾಡಿತ್ತು. ಈಗ ತಲೆಯೆತ್ತಿಕೊಂಡು ಧೈರ್ಯವಾಗಿ ರಾಜಮಾರ್ಗದಲ್ಲಿಯೇ ಹೋಗುವೆನು. (ಎಂದು ಹೊರಟುಹೋಗುವನು.)

(ತೆರೆಯಲ್ಲಿ ಕೋಲಾಹಲವಾಗುವುದು.)

ಕುಂಭೀಲಕ—(ಪ್ರವೇಶಿಸಿ) ತಾಯೆ, ಕುಂಟಮೋಡಕವೆಂಬ ತಮ್ಮ ತುಂಟಾನೆಯು ಸರಪಳಿಯನ್ನು ಬಿಡಿಸಿಕೊಂಡು ತನ್ನ ಸೊಂಡಲಿನಿಂದ ಒಬ್ಬ ಸನ್ಯಾಸಿಯನ್ನು ಎತ್ತಿಕೊಂಡು ರಾಜಮಾರ್ಗದಲ್ಲಿ ಜನರಿಗೆ ಭೀತಿಯನ್ನುಂಟುಮಾಡುತ್ತಾ ಬರುತ್ತಿತ್ತು. ಅಷ್ಟರಲ್ಲಿಯೇ ನಾನು ಬೇಗ ಹೋಗಿ ಬಹಳ ಧೈರ್ಯದಿಂದ ಆ ಸನ್ಯಾಸಿಯನ್ನು ಬಿಡಿಸಿ ಅದನ್ನು ಕಟ್ಟಿಹಾಕಿದೆನು. ನನ್ನ ಸಾಹಸಕ್ಕಾಗಿ ಅಲ್ಲಿದ್ದ ಒಬ್ಬ ಬ್ರಾಹ್ಮಣನು ತನ್ನಲ್ಲಿ ಯಾವ

ಸಂವಾಹಕಃ:- ........ ಆರ್ಯೇ ಅಹಮೇತೇನ ದ್ಯೂತಕರ-
ಅಪಮಾನೇನ ಶಾಕ್ಯಶ್ರಮಣಕೋ ಭವಿಷ್ಯಾಮಿ। ತತ್ಸಂವಾಹಕೋ
ದ್ಯೂತಕರಃ ಶಾಕ್ಯಶ್ರಮಣಕಃ ಸಂವೃತ್ತ ಇತಿ ಸ್ಮರ್ತವ್ಯಾನಿ
ಆರ್ಯಯಾ ಏತಾನ್ಯಕ್ಷರಾಣಿ।

ಸಂವಾಹಕಃ:- ಆರ್ಯೇ ಕೃತೋ ನಿಶ್ಚಯಃ।

ದ್ಯೂತೇನ ತತ್ಕೃತಂ ಮಮ ಯದ್ದೃಶ್ಯಂ ಜನಸ್ಯ ಸರ್ವಸ್ಯ।
ಇದಾನೀಂ ಪ್ರಕಟಶೀರ್ಷೋ ನರೇಂದ್ರಮಾರ್ಗೇಣ ವಿಹರಿಷ್ಯಾಮಿ॥
("ಯದ್ದೃಶ್ಯಃ ಸರ್ವಸ್ಯ ಜನಸ್ಯ" ಇತಿ ಪ್ರಾಚೀನಪಾಠಃ).

( ನೇಪಥ್ಯೇ ಕಲಕಲಃ )
(ಆಕಾಶೇ)

ಸಂವಾಹಕಃ:- (ಆಕರ್ಣ್ಯ) ಅಲೇ ಕಿಂ ತ್ವೇದಂ। ಕಿಂ ಭಣತಿ - "ಏಷ ಖಲು ವಸಂತಸೇನಾಯಾಃ ಖುಂಟಮೋಡಕೋ ನಾಮ ದುಷ್ಟಹಸ್ತೀ ವಿಚರತಿ" ಇತಿ। ಅಹೋ ಆರ್ಯಾಯಾ ಗಂಧಗಜಂ ಪ್ರೇಕ್ಷಿಷ್ಯೇ ಗತ್ವಾ। ಅಥವಾ ಕಿಂ ಮಮೈತೇನ। ಯಥಾವ್ಯವಸಿತಮನುಷ್ಠಾಸ್ಯಾಮಿ।
(ಇತಿ ನಿಷ್ಕ್ರಾಂತಃ)

(ತತಃ ಪ್ರವಿಶತ್ಯಪಟಾಕ್ಷೇಪೇಣ ಪ್ರಹೃಷ್ಟೋ ವಿಕಟೋಜ್ಜ್ವಲವೇಷಃ ಕರ್ಣಪೂರಕಃ)

ಕರ್ಣಾಪ್ರರ: - ........ ತತಸ್ತೇನ ದುಷ್ಟಬುದ್ಧಿನಾ ಕರಚರಣ-
ರದನೈಃ ಪ್ರಿಲ್ಲನ ಲಿಖಿತಮಿವ ನಗರೀಮಾತ್ಯಲಿಖಿತಮವಗಾಹ
ಮಾನೇನ ನಿಮಗ್ನಾದಿತಃ ಪರಿಚ್ಛೇದಃ (ಸಂಪಾದಕನ ಬ
ಭಿಹೂಕರೂಪಿ:) । ತಂ ಚ ಪರಿಭ್ರಷ್ಟದಂತಕೆಂಬಿನಿಭಾಜನಂ
ಶೀಕರೈಃ ಸಿಕ್ತ್ವಾ ದಂತಾಂತರೇ ಪುಷ್ಪಂ ಕ್ಷಿಪ್ತ್ವಾ ಪುನ-
ರಪ್ಯಭ್ಯುಷ್ಟಂ ಉಕ್ತೇನ – "ಹಾ, ಪರಿಚ್ಛಜನಸ್ಯ
ಮ್ಯಾಮಾದ್ಯತೇ" ಇತಿ ।

కర్ణపూరకః:— ...... తత ఆర్యే, ఏతేన
శూన్యాన్యాభరణస్థానాని పరామృశ్య ఊర్ధ్వం
ప్రేక్ష్య దీర్ఘం నిశ్వస్య అయం ప్రావారకో
మమోపరి క్షిప్తః।

వసంతసేనా:- కర్ణపూరక, జానీషే తావత్కిమేష జాతీ-
కుసుమవాసితః ప్రావారకో న వేతి।

కర్ణపూరకః:— ఆర్యే మదగంధేన । పుష్పం తం గంధం
న జానామి।

వసంతసేనా— నామాపి తావత్ప్రేక్షస్వ।

కర్ణపూరకః:— ఇదం నామాక్షరమేవ వాచయామి। (ఇతి
ప్రావారకముపనయతి)

వసంతసేనా:— ఆర్యచారుదత్తస్య (ఇతి వాచయిత్వా
సస్పృహం గృహీత్వా ప్రావృణోతి)

చేటి— కర్ణపూరక, శోభతే ఆర్యాయాః
ప్రావారకః।

కర్ణపూరకః:— ఆం శోభతే ఆర్యాయాః ప్రావారకః

వసంతసేనా— ఇదం తే పారితోషికం (ఇత్యాభరణం ప్రయచ్ఛతి)

కర్ణపూరకః:—(శిరసా గృహీత్వా ప్రణమ్య) సాంప్రతం పునః
శోభతే ఆర్యాయాః ప్రావారకః।

వసంతసేనా:— కర్ణపూరక, ఏతస్యాం వేలాయాం
క్వ ఆర్యచారుదత్తః।

కర్ణపూరకః:— ఏతేనైవ మార్గేణ ప్రవృత్తో గంతుం
గేహం.

వసంతసేనా— చేటి, ఉపరితనమాలిందకమారుహ్య ఆర్యం
[illegible]

ಪದಾರ್ಥವೂ ಇಲ್ಲದಕಾರಣ ತಾನು ಹೊದೆದಿದ್ದ ಈ ಬಹಿರ್ವಾಸವನ್ನು ನನಗೆ ಬಹುಮಾನಕೊಟ್ಟನು. (ಎಂದು ಬಹಿರ್ವಾಸವನ್ನು ಮುಂದಿರಿಸುವನು.)

ವಸಂತಸೇನೆ—ಆಹ! ಇದು, ನಮ್ಮ ಆರ್ಯ ಚಾರುದತ್ತನದು. ನನ್ನಲ್ಲಿರಲಿ (ಎಂದು ಹೊದೆದುಕೊಂಡು) ನಿನ್ನ ಸಾಹಸಕ್ಕೆ ಈ ಬಹುಮಾನವನ್ನು ತೆಗೆದುಕೊ. (ಎಂದು ಕೈಯಲ್ಲಿದ್ದ ಆಭರಣವನ್ನು ಕೊಟ್ಟು) ಎಲೆ ಮದನಿಕೆ, ನಾವು ಉಪ್ಪರಿಗೆಯ ಮೇಲಕ್ಕೆಹೋಗಿ ಆರ್ಯ ಚಾರುದತ್ತನನ್ನು ನಿರೀಕ್ಷಿಸಿಕೊಂಡಿರೋಣ, ನಡೆ. (ಎಂದು ಹೋಗುವರು).

ಇದು

ದ್ಯೂತಕರ ಸಂವಾಹಕವೆಂಬ ಎರಡನೆಯಂಕಂ

---

# ಮೂರನೆಯಂಕಂ.

---

(ಸ್ಥಾನ—ಚಾರುದತ್ತನ ಮನೆ)

ವರ್ಧಮಾನಕ—(ಪ್ರವೇಶಿಸಿ) ಸಂಗೀತವನ್ನು ಕೇಳುವುದಕ್ಕಾಗಿ ಹೋದ ಆರ್ಯ ಚಾರುದತ್ತನು ಅರ್ಧರಾತ್ರಸಮಯವಾದರೂ ಏಕೆ ಬರಲಿಲ್ಲ? ಹಾಸಿಗೆಯನ್ನು ಸಿದ್ಧಪಡಿಸಿರುವೆನು. (ನೋಡಿ) ಓಹೋ! ಆರ್ಯ ಚಾರುದತ್ತನು ಮೈತ್ರೇಯನೊಡನೆ ಬರುತ್ತಿರುವನು.

ಚಾರುದತ್ತ—(ವಿದೂಷಕನೊಡನೆ ಪ್ರವೇಶಿಸಿ) ಅಯ್ಯಾ, ಮೈತ್ರೇಯನೆ, ವಿದ್ವಾಂಸನಾದ ರೇಭಿಲನು ಬಲುಚೆನ್ನಾಗಿ ಗಾನಮಾಡಿದನು. ಪುರುಷನು ಗಾನಮಾಡಿದರೆ ಇಷ್ಟು ಮನೋಹರವಾಗಿರಲಾರದು. ಅದುದರಿಂದ ಪುರುಷವೇಷವನ್ನು ಧರಿಸಿದ ಸ್ತ್ರೀಯೇ ಇರಬಹುದೆಂದು ತೋರುವುದು.

ವಿದೂಷಕ—ಮಿತ್ರನೆ, ನಿನಗೆ ಸಂಗೀತದ ಯೋಚನೆ; ನನಗೆ ನಿದ್ರೆಯ ಯೋಚನೆ. ಅಂಗಡಿ ಬೀದಿಯಲ್ಲಿ ನೋಡಿದರೆ, ನಾಯಿಗಳೆಲ್ಲಾ ಮಲಗಿ ನಿದ್ರೆ ಮಾಡುತ್ತಿವೆ. ಇದೋ, ಈ ಚಂದ್ರನೂಕೂಡ ಕತ್ತಲೆಗೆ ಅವಕಾಶವನ್ನು ಕೊಡುತ್ತಾ ಅಂತರಿಕ್ಷವೆಂಬ ಉಪ್ಪರಿಗೆಯಿಂದ ಇಳಿಯುತ್ತಿರುವನು. ([illegible])

ಚಾರುದತ್ತ—(ನೋಡಿ) ಅಹುದು, ಬಲು ಚೆನ್ನಾಗಿ ಹೇಳಿದೆ. (ಕಾಲನ್ನು ತೊಳೆದುಕೊಂಡು ಬಂದು) ಏನಯ್ಯಾ? ಮೈತ್ರೇಯನೇ, ಕಾಲು ತೊಳೆಯದೆ ಆಗಲೆ ಮಲಗಿದೆ?

ವಿದೂಷಕ—ನನಗೇನು? ಮಂಚವೇ? ಹಾಸಿಗೆಯೇ? ಕತ್ತೆಯ ಹಾಗೆ ನೆಲದಮೇಲೆ ಹೊರಳಾಡುವ ನಾನು ಕಾಲುತೊಳೆದುಕೊಳ್ಳುವುದೇಕೆ?

ವರ್ಧಮಾನಕ—(ವಿದೂಷಕನನ್ನು ಕುರಿತು) ಇದೋ, ಒಡವೆಯ ಗಂಟು. ನಾನು ಹಗಲು ಕಾದಿರಬೇಕು. ನೀನು ರಾತ್ರಿ ಕಾದಿರ

ತೃತೀಯಾಂಕ

(ತತಃ ಪ್ರವಿಶತಿ ಚೇಟಃ)

ಚೇಟಃ:- ಸುಜನಃ ಖಲು ಭೃತ್ಯಾನುಕಂಪಕಃ ಸ್ವಾಮೀ ನಿರ್ಧನಕೋಽಪಿ ಶೋಭತೇ। ಪಿಶುನಃ ಪುನರ್ದ್ರವ್ಯಗರ್ವಿತೋ ದುಷ್ಕರಃ ಖಲು ಪರಿಣಾಮದಾರುಣಃ।

ಅಪಿ ಚ॥

ಸಸ್ಯಲುಬ್ಧೋ ಬಲೀವರ್ದೋ ನ ಶಕ್ಯೋ ವಾರಯಿತುಂ<br>
ಅನ್ಯಪ್ರಸಕ್ತಂ ಕಲತ್ರಂ ನ ಶಕ್ಯಂ ವಾರಯಿತುಂ।<br>
ದ್ಯೂತಪ್ರಸಕ್ತೋ ಮನುಷ್ಯೋ ನ ಶಕ್ಯೋ ವಾರಯಿತುಂ<br>
ಯೋಽಪಿ ಸ್ವಾಭಾವಿಕೋ ದೋಷೋ ನ ಶಕ್ಯೋ ವಾರಯಿತುಂ॥

ಕಾಽಪಿ ವೇಲಾ ಆರ್ಯಚಾರುದತ್ತಸ್ಯ ಗಾಂಧರ್ವಂ ಶ್ರೋತುಂ ಗತಸ್ಯ। ಅತಿಕ್ರಾಮತ್ಯರ್ಧರಜನೀ। ಅದ್ಯಾಪಿ ನಾಗಚ್ಛತಿ। ತದ್ಯಾವದ್ಬಹಿರ್ದ್ವಾರಶಾಲಾಯಾಂ ಗತ್ವಾ ಸ್ವಪಿಮಿ। (ಇತಿ ತಥಾ ಕರೋತಿ)

(ತತಃ ಪ್ರವಿಶತಿ ಚಾರುದತ್ತೋ ವಿದೂಷಕಶ್ಚ)

ಚಾರುದತ್ತಃ:- ...... ಅಹೋ ಸುಷ್ಠು ಭಾವರೇಭಿಲೇನ ಗೀತಂ।

ವಿದೂಷಕಃ:- ಮಮ ತಾವದ್ದ್ವಾಭ್ಯಾಮೇವ ಹಾಸ್ಯಂ ಜಾಯತೇ। ಸ್ತ್ರಿಯಾ ಸಂಸ್ಕೃತಂ ಪಠಂತ್ಯಾ, ಮನುಷ್ಯೇಣ ಚ ಕಾಕಲೀಂ ಗಾಯತಾ। ಸ್ತ್ರೀ ತಾವತ್ಸಂಸ್ಕೃತಂ ಪಠಂತೀ ದತ್ತನವನಸ್ಯೇವ ಗೃಷ್ಟಿಃ, ಅಧಿಕಂ ಸೂಸೂ ಶಬ್ದಂ ಕರೋತಿ। ಮನುಷ್ಯೋಽಪಿ ಕಾಕಲೀಂ ಗಾಯನ್ ಶುಷ್ಕಸುಮನೋದಾಮವೇಷ್ಟಿತೋ ವೃದ್ಧಪುರೋಹಿತ ಇವ ಮಂತ್ರಂ ಜಪನ್ ದೃಢಂ ಮೇ ನ ರೋಚತೇ।

ಚಾರುದತ್ತಃ:- ವಯಸ್ಯ, ಸುಷ್ಠು ಖಲ್ವದ್ಯ ಗೀತಂ ಭಾವರೇಭಿಲೇನ। ನ ಚ ಭವಾನ್ ಪರಿತುಷ್ಟಃ।

ರಕ್ತಂ ಚ ನಾಮ ಮಧುರಂ ಚ ಸಮಂ ಸ್ಫುಟಂ ಚ<br>
ಭಾವಾನ್ವಿತಂ ಚ ಲಲಿತಂ ಚ ಮನೋಹರಂ ಚ।<br>
ಕಿಂ ವಾ ಪ್ರಶಸ್ತವಚನೈರ್ಬಹುಭಿರ್ಮದುಕ್ತೈಃ<br>
ಅಂತರ್ಹಿತಾ ಯದಿ ಭವೇದ್ವನಿತೇತಿ ಮನ್ಯೇ॥

అపిచ।

తం తస్య స్వరసంక్రమం మృదుగిరః శ్లిష్టం చ తంత్రీస్వనం
వర్ణానామపి మూర్ఛనాంతరగతం తారం విరామే మృదుం।
హేలాసంయమితం పునశ్చ లలితం రాగద్విరుచ్చారితం
యత్సత్యం విరతేऽపి గీతసమయే గచ్ఛామి శృణ్వన్నివ॥

. . . . . . . . . . . . . .

. . . . . . . . . .

చేటః:— . . . . . . అయ్య వందే। మైత్రేయ
త్వామపి వందే। అత్ర పిత్రేణ ఆసనే నిషీదతు
మాయయా।
( ఉభౌ =(చారుదత్త+విదూషక) నాట్యేన ప్రవిశ్య ఉపవిశతః)

విదూషకః:— వర్ధమానక, రదనికామానయ పాదౌ ధావితుం।

చారుదత్తః:— (సానుకంపం) అలం సుప్తజనప్రబోధనేన।

చేటః:— ఆర్య మైత్రేయ అహం పానీయం గృహ్ణామి।
త్వం పాదౌ ధావ।

విదూషకః— (సక్రోధం) భో! వయస్య, ఏష ఇదానీం
దాస్యాః పుత్రో భూత్వా పానీయం గృహ్ణాతి।
మాం పునర్బ్రాహ్మణం పాదౌ ధావయతి।

చారుదత్తః:— వయస్య మైత్రేయ, త్వముదకం గృహాణ।
వర్ధమానకః ప్రక్షాలయతు।

చేటః:— ఆర్య మైత్రేయ దేహ్యుదకం।
(విదూషకస్తథా కరోతి। చేటః చారుదత్తస్య పాదౌ
ప్రక్షాల్య ఉపసరతి)

చారుదత్తః:— దీయతాం బ్రాహ్మణస్య పాదోదకం।

విదూషకః:— కిం మమ పాదోదకేన। భూమ్యామేవ
మయా తాడితగర్దభేణేవ పునరపి లోఠితవ్యం

ಚೇಟಃ :- ಆರ್ಯಮೈತ್ರೇಯ, ಬ್ರಾಹ್ಮಣಃ ಖಲು ತ್ವಂ।

ವಿದೂಷಕಃ :- ಯಥಾ ಸರ್ವನಾಗಾನಾಂ ಮಧ್ಯೇ ಡುಂಡುಭಃ,
ತಥಾ ಸರ್ವಬ್ರಾಹ್ಮಣಾನಾಂ ಮಧ್ಯೇಽಹಂ ಬ್ರಾಹ್ಮಣಃ।

ಚೇಟಃ :- ಆರ್ಯ ಮೈತ್ರೇಯ, ತಥಾಪಿ ಧಾವಿಷ್ಯಾಮಿ।

. . . . . . . . . . . . . . . . . . .

. . . . . . .

(ತತಃ ಪ್ರವಿಶತಿ ಶರ್ವಿಲಕಃ)

ಶರ್ವಿಲಕಃ :—

ಕೃತ್ವಾ ಶರೀರಪರಿಣಾಹಸುಖಪ್ರವೇಶಂ
ಶಿಕ್ಷಾಬಲೇನ ಚ ಬಲೇನ ಚ ಕರ್ಮಮಾರ್ಗಂ ।
ಗಚ್ಛಾಮಿ ಭೂಮಿಪರಿಸರ್ಪಣಘೃಷ್ಟಪಾರ್ಶ್ವೋ
ನಿರ್ಮುಚ್ಯಮಾನ ಇವ ಜೀರ್ಣತನುರ್ಭುಜಂಗಃ ॥ = ಸಂಧಿಂ.

(ನಭೋಽವಲೋಕ್ಯ ಸಹರ್ಷಂ) ಅಯೇ, ಕಥಮಸ್ತಮುಪಗಚ್ಛತಿ ಸ ಭಗವಾನ್
ಮೃಗಾಂಕಃ । ತಥಾ ಹಿ ।

ನೃಪತಿಪುರುಷಶಂಕಿತಪ್ರಚಾರಂ ಪರಗೃಹದೂಷಣನಿಶ್ಚಿತೈಕವೀರಂ ।
ಘನಪಟಲತಮೋನಿರುದ್ಧತಾರಾ ರಜನಿರಿಯಂ ಜನನೀವ ಸಂವೃಣೋತಿ ॥

(ಪಟಲಂ ವೃಂದಂ ಕೋಶಭೇದಶ್ಚ · ತಾರಾ ನಕ್ಷತ್ರಮಕ್ಷ್ಣಃ ಕನೀನಿಕಾ ಚ)

ವೃಕ್ಷವಾಟಿಕಾಪರಿಸರೇ ಸಂಧಿಂ ಕೃತ್ವಾ ಪ್ರವಿಷ್ಟೋಽಸ್ಮಿ ಮಧ್ಯಮಕಂ ।
ತದ್ಯಾವದಿದಾನೀಂ ಚತುಃಶಾಲಕಮಪಿ ದೂಷಯಾಮಿ । ಭೋಃ

ಕಾಮಂ ನೀಚಮಿದಂ ವದಂತು ಪುರುಷಾಃ ಸ್ವಪ್ನೇ ಚ ಯದ್ವರ್ಧತೇ
ವಿಶ್ವಸ್ತೇಷು ಚ ವಂಚನಾಪರಿಭವಶ್ಚೌರ್ಯಂ ನ ಶೌರ್ಯಂ ಹಿ ತತ್ ।
ಸ್ವಾಧೀನಾ ವಚನೀಯತಾಪಿ ಹಿ ವರಂ ಬದ್ಧೋ ನ ಸೇವಾಂಜಲಿ
ಮಾರ್ಗೋ ಹ್ಯೇಷ ನರೇಂದ್ರಸೌಪ್ತಿಕವಧೇ ಪೂರ್ವಂ ಕೃತೋ ದ್ರೌಣಿನಾ ।

ಬೇಕೆಂದಲ್ಲವೆ ಆರ್ಯ ಚಾರುದತ್ತನು ಆಜ್ಞಾಪಿಸಿರುವುದು? ಆದುದರಿಂದ ತೆಗೆದುಕೊ. (ಕೊಟ್ಟುಹೋಗುವನು.)

ವಿದೂಷಕ—(ತೆಗೆದುಕೊಂಡು) ಈ ಹಾಳು ಒಡವೆ ಇನ್ನೂ ಇದೆ. ಇಷ್ಟು ದೊಡ್ಡಪಟ್ಟಣದಲ್ಲಿ ಒಬ್ಬ ಕಳ್ಳನೂ ಗತಿಯಿಲ್ಲವೆ? ನಾನು ನಿದ್ದೆ ಮಾಡುವಾಗ ಯಾವನಾದರೂ ಕದ್ದುಕೊಂಡು ಹೋಗಬಾರದೆ? ಇದು ನನ್ನ ಕೈ ತಪ್ಪಿದ ಹೊರತು ನನಗೆ ಚೆನ್ನಾಗಿ ನಿದ್ರೆಬರಲವಕಾಶ ವಿಲ್ಲ. ಅಯ್ಯಾ, ಈ ಒಡವೆಯ ಗಂಟನ್ನು ಒಳಗಣ ತೊಟ್ಟಿಯಲ್ಲಿಡುವೆನು.

ಚಾರುದತ್ತ—ಬೇಡಬೇಡ, ಆ ವಸಂತಸೇನೆಗೆ ಕೊಡುವವರೆಗೂ ನಿನ್ನಹತ್ತಿರವೇ ಎಚ್ಚರಿಕೆಯಿಂದ ಇಟ್ಟುಕೊಂಡಿರು. (ಮಲಗಿಕೊಂಡು) ರೇಭಿಲನು ಎಷ್ಟು ಚೆನ್ನಾಗಿ ಹಾಡಿದನು!

ವಿದೂಷಕ—ನಿನಗೆ ನಿದ್ದೆ ಬರಲಿಲ್ಲವೊ?

ಚಾರುದತ್ತ—ಇಲ್ಲ. ಬರುವುದು, ಬಂದರೇನು?

ವಿದೂಷಕ—ಆದರೆ ನಾನೂ ನಿದ್ರಿಸುವೆನು. (ಮಲಗುವನು.)

ಶರ್ವಿಳಕ—(ಪ್ರವೇಶಿಸಿ) ಓಹೋ! ಚಂದ್ರನು ಅಸ್ತಂಗತನಾದನು. ಆದುದರಿಂದ ಆ ಹಾಳು ಬಿಲ್ಲೆಯವರ ಕಾಟವೂ ಇಲ್ಲ. ಹಿತ್ತಲಕಡೆಯಿಂದ ಒಳಕ್ಕೆ ಬಂದಿರುವೆನು, ಇನ್ನು ಇಲ್ಲಿ ಕನ್ನಹಾಕಿ ಈ ತೊಟ್ಟಿಯೊಳಕ್ಕೆ ಹೋಗುವೆನು. ಜನರು ಮಲಗಿ ನಿದ್ದೆಮಾಡುವಾಗ ಒಳಕ್ಕೆ ನುಗ್ಗಿ ದ್ರವ್ಯವನ್ನು ಅಪಹರಿಸಿಕೊಂಡು ಹೋಗುವುದು ಬಹು ನೀಚ ಕಾರ್ಯವೆಂದು ಹೇಳುವರು. ಧನಿಕರ ಹಿಂದೆಮುಂದೆ ಸುತ್ತಿ ಅವರನ್ನು ಸ್ತೋತ್ರಮಾಡಿ, ಅದರಿಂದ ಹೊಟ್ಟೆ ಹೊರೆಯುವುದಕ್ಕಿಂತಲೂ, ಈ ಚೌರ್ಯವೇ ಉತ್ತಮವೆಂದು ನನ್ನಮತ. ಆದುದರಿಂದ ಈಗ ಕನ್ನವನ್ನು ಯಾವಸ್ಥಳದಲ್ಲಿ ಕೊರೆಯಲಿ? (ಗೋಡೆಯನ್ನು ಚೆನ್ನಾಗಿನೋಡಿ) ಈ ಗೋಡೆಯು ಬಚ್ಚಲುನೀರಿನಿಂದ ನನೆದಿರುವುದು. ಉಪ್ಪುಮಣ್ಣು ಉದಿರುತ್ತಿರುವುದು. ಹೆಗ್ಗಣಗಳು ಬಗೆದಿರುವುದರಿಂದ ಗೋಡೆಯು ಜೀರ್ಣವಾಗಿರುವುದು. ಭಾಪು ಭಾಪು! ಇಲ್ಲಿ ನನ್ನಕಾರ್ಯ ಸಿದ್ಧಿಯಾಗಬಹುದು. ಸುಟ್ಟಿಟ್ಟಿಗೆಯ ಗೋಡೆಯಾಗಿದ್ದರೆ ಮೊದಲು ಒಂದಿಟ್ಟಿಗೆಯನ್ನು ಬಿಡಿಸಿಕೊಂಡು ಆಮೇಲೆ ಮಿಕ್ಕ ಇಟ್ಟಿಗೆಗಳನ್ನು ಒಂದೊಂದ

ನ್ನಾಗಿ ಬಿಡಿಸಿಕೊಳ್ಳುವುದು. ಹಸಿ ಇಟ್ಟಿಗೆಯಾಗಿದ್ದರೆ ಭೇದಿಸುವುದು; ಮಣ್ಣುಹೆಂಟೆಯ ಗೋಡೆಯಾಗಿದ್ದರೆ ನೀರಿನಿಂದ ನನೆಯಿಸುವುದು; ಮರದ ಗೋಡೆಯಾಗಿದ್ದರೆ ಕಿತ್ತುಹಾಕುವುದು—ಈ ಪ್ರಕಾರವಾಗಿ ಕನಕಶಕ್ತ್ಯಾಚಾರ್ಯರು ಕನ್ನಹಾಕುವುದಕ್ಕೆ ನಾಲ್ಕು ವಿಧವಾದ ಉಪಾಯಗಳನ್ನು ಹೇಳಿರುವರು ಇದು ಸುಟ್ಟಿಟ್ಟಿಗೆಯ ಗೋಡೆಯಾದುದರಿಂದ ಪೂರ್ಣಕುಂಭವೆಂಬ ಕನ್ನವನ್ನು ಹಾಕಿ, ಇಟ್ಟಿಗೆಗಳನ್ನು ಎಳೆದುಕೊಳ್ಳುವೆನು. ಯಾರಕಣ್ಣಿಗೂ ಕಾಣದಂತೆಯೂ, ಶಸ್ತ್ರವನ್ನು ಪ್ರಯೋಗಿಸಿದರೆ ತಪ್ಪಿಸಿಕೊಳ್ಳುವಂತೆಯೂ, ಅನುಗ್ರಹಿಸಿರುವ ಕನಕಶಕ್ತ್ಯಾಚಾರ್ಯರೇ, ನಮಿಸುವೆನು. (ನಮಸ್ಕರಿಸಿ) ಅಯ್ಯೋ! ಅಳತೆಯ ದಾರವನ್ನು ಮರೆತುಬಿಟ್ಟು ಬಂದೆನಲ್ಲಾ! (ಯೋಚಿಸಿ) ಇರಲಿ! ನನ್ನ ಜನಿವಾರವಿದೆಯಷ್ಟೆ? ಇದರಿಂದಲೇ ಅಳೆಯುವೆನು. ಇದು ಸಮಯದಲ್ಲಿ, ನನ್ನಂತಹರಿಗೆ ಬಹು ಉಪಯೋಗಕರವಾದುದು. ಇದರಿಂದ ಅಳತೆ ಮಾಡಬಹುದು. ಅಡ್ಡಿಕೆ, ಗುಂಡು ಮೊದಲಾದುವನ್ನು ಕಟ್ಟಬಹುದು. ಬಾಗಿಲು ಹಾಕಿದ್ದರೆ ಇದನ್ನು ಹಾಕಿ ಅಗಳಿಯನ್ನು ತೆಗೆಯಬಹುದು. ಹಾವು ಕಚ್ಚಿದರೆ ವಿಷವೇರದಂತೆ ಸುತ್ತಿಕೊಳ್ಳಬಹುದು. (ಅಳತೆಮಾಡಿ ಕನ್ನವನ್ನು ಕೊರೆದು ನೋಡಿ) ಆಹ! ಇದೇನು ಒಳಗೆ ದೀಪಬೇರೆ ಉರಿಯುತ್ತಿದೆ. ಇನ್ನೊಂದು ಇಟ್ಟಿಗೆ ಎಳೆದರಾಯಿತು. ಅಯ್ಯೋ! ಕಷ್ಟಕಷ್ಟ. ಏನುಮಾಡಲಿ? ಹಾವು ಕಚ್ಚಿತಲ್ಲಾ! (ಜನಿವಾರವನ್ನು ಕೈಗೆ ಬಿಗಿದು) ಈ ವಿಷವೇಗವನ್ನು ಸೈಸುವುದು ಕಷ್ಟ! (ಔಷಧಿಯನ್ನು ಹಾಕಿ) ಆಃ! ಈಗ ಸುಖವಾಯಿತು. (ಪುನಃ ಕನ್ನವನ್ನು ಕೊರೆದುನೋಡಿ) ಇನ್ನು ಕನ್ನದ ಕೆಲಸವೆಲ್ಲಾ ಮುಗಿಯಿತು. ಒಳಕ್ಕೆ ಹೋಗುವೆನು. (ಎಂದು ಒಳಕ್ಕೆಹೋಗಿ ಸುತ್ತಲೂನೋಡಿ) ಇಲ್ಲಿ ಇಬ್ಬರು ಮಲಗಿರುವರು. ಇರಲಿ, ನಾನು ತಪ್ಪಿಸಿಕೊಂಡು ಓಡಿಹೋಗುವುದಕ್ಕೋಸ್ಕರ ಮೊದಲು ಈ ಬಾಗಿಲನ್ನು ತೆರೆಯುವೆನು. (ತೆರೆದು) ಈ ಕದವು ಹಳೆಯದಾದುದರಿಂದ ತಿರುಗಣೆಯು ಸದ್ದಾಗುವುದು. ಇದಕ್ಕಿಷ್ಟು ನೀರನ್ನಾದರೂ ತಂದು ಎರಚುವೆನು. (ಹುಡುಕಿ ನೀರನ್ನು ತಂದು ಎರಚಿ ಕದವನ್ನು ತೆರೆದು) ಇವರಿಬ್ಬರೂ ಕಪಟನಿದ್ರೆಯಲ್ಲಿರುವರೋ ಅಥವಾ ನಿಶ್ಚಯವಾಗಿಯೂ ನಿದ್ರೆಮಾಡುವರೋ ತಿಳಿ

ತತ್ ಕಸ್ಮಿನ್ ದೇಶೇ ಸಂಧಿಮುತ್ಪಾದಯಾಮಿ ।

ದೇಶಃ ಕೋ ನು ಜಲಾವಸೇಕಶಿಥಿಲೋ ಯಸ್ಮಿನ್ನ ಶಬ್ದೋ ಭವೇತ್
ಭಿತ್ತೀನಾಂ ಚ ನ ದರ್ಶನಾಂತರಗತಃ ಸಂಧಿಃ ಕರಾಲೋ ಭವೇತ್ ।
ಕ್ಷಾರಕ್ಷೀಣತಯಾ ಚ ಲೋಷ್ಟಕಕೃಶಂ ಜೀರ್ಣಂ ಕ್ವ ಹರ್ಮ್ಯಂ ಭವೇತ್
ಕಸ್ಮಿನ್ ಸ್ತ್ರೀಜನದರ್ಶನಂ ಚ ನ ಭವೇತ್ ಸ್ಯಾದರ್ಥಸಿದ್ಧಿಶ್ಚ ಮೇ ॥

ಶರ್ವಿಲಕಃ. (ಭಿತ್ತಿಂ ಪರಾಮೃಶ್ಯ) ನಿತ್ಯಾದಿತ್ಯದರ್ಶನೋದಕಸೇಚನೇನ ದೂಷಿತೇಯಂ ಭೂಮಿ ಕ್ಷಾರಕ್ಷೀಣಾ । ಮೂಷಿಕೋತ್ಕರಶ್ಚೇಹ । ಹಂತ, ಸಿದ್ಧೋಽಯಮರ್ಥಃ । ಪ್ರಥಮಮೇತತ್ ಸ್ಕಂಧಪುತ್ರಾಣಾಂ ಸಿದ್ಧಿಲಕ್ಷಣಂ । ಅತ್ರ ಕರ್ಮಪ್ರಾರಂಭೇ ಕೀದೃಶಮಿದಾನೀಂ ಸಂಧಿಮುತ್ಪಾದಯಾಮಿ । ಇಹ ಖಲು ಭಗವತಾ ಕನಕಶಕ್ತಿನಾ ಚತುರ್ವಿಧಃ ಸಂಧ್ಯುಪಾಯೋ ದರ್ಶಿತಃ । ತದ್ಯಥಾ - ಪಕ್ವೇಷ್ಟಕಾನಾಮಾಕರ್ಷಣಂ, ಆಮೇಷ್ಟಕಾನಾಂ ಛೇದನಂ, ಪಿಂಡಮಯಾನಾಂ ಸೇಚನಂ, ಕಾಷ್ಠಮಯಾನಾಂ ಪಾಟನಮಿತಿ । ತದತ್ರ ಪಕ್ವೇಷ್ಟಕೇ ಇಷ್ಟಿಕಾಕರ್ಷಣಂ । ತತ್ರ

ಪದ್ಮವ್ಯಾಕೋಶಂ ಭಾಸ್ಕರಂ ಬಾಲಚಂದ್ರಂ
ವಾಪೀ ವಿಸ್ತೀರ್ಣಂ ಸ್ವಸ್ತಿಕಂ ಪೂರ್ಣಕುಂಭಂ ।
ತತ್ ಕಸ್ಮಿನ್ ದೇಶೇ ದರ್ಶಯಾಮ್ಯಾತ್ಮಶಿಲ್ಪಂ
ದೃಷ್ಟ್ವಾ ಶ್ವೋಯಂ ಯದ್ವಿಸ್ಮಯಂ ಯಾಂತಿ ಪೌರಾಃ ॥

ತದತ್ರ ಪಕ್ವೇಷ್ಟಕೇ ಪೂರ್ಣಕುಂಭ ಏವ ಶೋಭತೇ । ತಮುತ್ಪಾದಯಾಮಿ ।

ಅನ್ಯಾಸು ಭಿತ್ತಿಷು ಮಯಾ ನಿಶಿ ಪಾಟಿತಾಸು
ಕ್ಷಾರಕ್ಷತಾಸು ವಿಷಮಾಸು ಚ ಕಲ್ಪನಾಸು ।
ದೃಷ್ಟ್ವಾ ಪ್ರಭಾತಸಮಯೇ ಪ್ರತಿವೇಶಿವರ್ಗೋ
ದೋಷಾಂಶ್ಚ ಮೇ ವದತಿ ಕರ್ಮಣಿ ಕೌಶಲಂ ಚ ॥

ನಮೋ ವರದಾಯ ಕುಮಾರಕಾರ್ತಿಕೇಯಾಯ, ನಮಃ ಕನಕಶಕ್ತಯೇ ಬ್ರಹ್ಮಣ್ಯದೇವಾಯ ದೇವವ್ರತಾಯ, ನಮೋ ಭಾಸ್ಕರನಂದಿನೇ, ನಮೋ ಯೋಗಾಚಾರ್ಯಾಯ ಯಸ್ಯಾಹಂ ಪ್ರಥಮಃ ಶಿಷ್ಯಃ ।

తేన చ పరితుష్టేన యోగరోచనా మే దత్తా ।

అనయా హి సమాలబ్ధం న మాం ద్రక్ష్యంతి రక్షిణః ।
శస్త్రం చ పతితం గాత్రే రుజం నోత్పాదయిష్యతి ।

(తథా కరోతి) ధిక్కష్టం । ప్రమాణసూత్రం మే విస్మృతం ।
(విచింత్య) ఆం, ఇదం యజ్ఞోపవీతం ప్రమాణసూత్రం
భవిష్యతి । యజ్ఞోపవీతం హి నామ బ్రాహ్మణస్య మహ-
దుపకరణద్రవ్యం , విశేషతోఽస్మద్విధస్య । కుతః

ఏతేన మాపయతి భిత్తిషు కర్మమార్గ-
మేతేన మోచయతి భూషణసంప్రయోగాన్ ।
ఉద్ఘాటకో భవతి యంత్రదృఢే కవాటే
దష్టస్య కీటభుజగైః పరివేష్టనం చ ॥

ಯದು, ಇರಲಿ ಪರೀಕ್ಷಿಸುವೆನು. (ಸದ್ದುಮಾಡಿ ನೋಡಿ) ಇವರು ನಿಶ್ಚಯವಾಗಿಯೇ ನಿದ್ರೆಮಾಡುತ್ತಿರಬಹುದು, ಇಲ್ಲದಿದ್ದರೆ ಈ ನಿಶ್ವಾಸವೂ ಈ ಕೈಕಾಲುಗಳೂ ಹೀಗಿರಲಾರವು. (ಸುತ್ತಲೂ ನೋಡಿ) ಇದು ಮದ್ದಳೆ, ಇದು ವೀಣೆ, ಇದು ಪುಸ್ತಕ, ಇದನ್ನೆಲ್ಲಾ ನೋಡಿದರೆ ನಾಟ್ಯಾಚಾರ್ಯನ ಮನೆಯಾಗಿರಬಹುದೆಂದು ತೋರುವುದು. ಮನೆ ದೊಡ್ಡದಾಗಿರುವುದೆಂದು ನಾನು ಭ್ರಾಂತಿಪಟ್ಟು ಬಂದೆನು. ಈತನು ನಿಶ್ಚಯವಾಗಿ ದರಿದ್ರನೋ ಅಥವಾ ಕಳ್ಳರು ಕದ್ದುಕೊಂಡು ಹೋದಾರೆಂದು ಹಣವನ್ನೆಲ್ಲಾ ನೆಲದಲ್ಲಿ ಹುಗಿದಿಟ್ಟಿರುವನೊ ?

ವಿದೂಷಕ—(ಕನವರಿಸುತ್ತಾ) ಅಯ್ಯಾ, ಚಾರುದತ್ತನೆ, ಕನ್ನದಂತೆ ಕಾಣಬರುವುದು ! ಕಳ್ಳನು ಬಂದಿರುವಹಾಗೂ ತೋರುವುದು ! ಆದಕಾರಣ ನೀನು ಕೊಟ್ಟಿದ್ದ ಒಡವೆಯ ಗಂಟನ್ನು ತೆಗೆದುಕೊ.

ಶರ್ವಿಳಕ—(ಕೇಳಿ ಹೆದರಿ) ಇದೇನು ! ಇವನು ನನ್ನನ್ನು ಹಾಸ್ಯಮಾಡುವನೋ ? ಅಥವಾ ಕನವರಿಸುವನೋ ; (ಚೆನ್ನಾಗಿನೋಡಿ) ಇಲ್ಲಇಲ್ಲ, ಹರಕು ಬಟ್ಟೆಯಲ್ಲಿ ಕಟ್ಟಿರುವ ಒಡವೆಗಳು ದೀಪದ ಬೆಳಕಿನಿಂದ ಥಳಥಳಗುಟ್ಟುತ್ತಿರುವುವು. ಇರಲಿ ತೆಗೆದುಕೊಳ್ಳುವೆನು. (ಯೋಚಿಸಿ) ಅಯ್ಯೋ ಪಾಪ ! ನನ್ನಂತಯೇ ಈತನೂ ದರಿದ್ರನು. ನಿದ್ರೆಯಲ್ಲಿ ಕೊಟ್ಟುದನ್ನು ತೆಗೆದುಕೊಂಡು, ಇವನನ್ನು ಏಕೆ ಸಂಕಟಪಡಿಸಬೇಕು ? ಹೊರಟುಹೋಗೋಣ.

ವಿದೂಷಕ—(ಕನವರಿಸುತ್ತಾ) ಅಯ್ಯಾ ಮಿತ್ರನೆ, ಈ ಒಡವೆಯ ಗಂಟನ್ನು ನೀನು ತೆಗೆದುಕೊಳ್ಳದಿದ್ದರೆ ಗೋವುಗಳಮೇಲೂ, ಬ್ರಾಹ್ಮಣರ ಮೇಲೂ ಆಣೆ ಇದೆ. ಇದನ್ನು ನಾನು ಭದ್ರಪಡಿಸಲಾರೆನು.

ಶರ್ವಿಳಕ— ಇವನು ಗೋಬ್ರಾಹ್ಮಣರಮೇಲೆ ಆಣೆಯಿಡುವನು. ಆದುದರಿಂದ ನಾನು ತೆಗೆದುಕೊಳ್ಳಲೇಬೇಕು. ಆಃ ! ದೀಪಬೇರೆ ಉರಿಯುತ್ತಿರುವುದಲ್ಲಾ ! ಹೇಗೆ ತೆಗೆದುಕೊಳ್ಳಲಿ ? ಇರಲಿ, ನನ್ನ ಸಮೀಪದಲ್ಲಿರುವ ಹುಳುಗಳನ್ನು ಬಿಡುವೆನು (ಬಿಟ್ಟು ದೀಪವನ್ನಾರಿಸಿ) ಓಹೋ ! ಇದೇನು ಹುಳುಗಳು ಆಗಲೇ ದೀಪವನ್ನಾರಿಸಿ ಕತ್ತಲೆಯನ್ನು ಮಾಡಿದುವು ! ಅಥವಾ ಅವು ಮಾಡಿದುದೇನು ! ನಮ್ಮ ಬ್ರಾಹ್ಮಣಕುಲಕ್ಕೆ ನಾನೇ ಕತ್ತಲೆಯನ್ನುಂ

ಟುಮಾಡಿದೆನು. ನಾನು ನಾಲ್ಕು ವೇದಗಳನ್ನೂ ತಿಳಿದ ಬ್ರಾಹ್ಮಣನ ಮಗನಾಗಿದ್ದರೂ ಸೂಳೆಯಾದ ಆ ಮದನಿಕೆಗೋಸ್ಕರ ಈ ಕೆಟ್ಟಕೆಲಸವನ್ನು ಮಾಡುತ್ತಿರುವೆನು. ಈ ಬ್ರಾಹ್ಮಣನು ಒಡವೆಯ ಗಂಟನ್ನು ತೆಗೆದುಕೊ ಎಂದು ನನ್ನನ್ನು ಬಲಾತ್ಕರಿಸುತ್ತಿರುವನು. ಆದುದರಿಂದ ಇವನ ಮಾತನ್ನು ಮೀರಬಾರದು. (ಗಂಟನ್ನು ತೆಗೆದುಕೊಳ್ಳಲು ಯತ್ನಿಸುವನು.)

ವಿದೂಷಕ—ಅಯ್ಯಾ, ಮಿತ್ರನೆ, ಇದೇನು ನಿನ್ನ ಕೈ ತಣ್ಣಗಿರುವುದು ?

ಶರ್ವಿಳಕ—ಆಃ ಪ್ರಮಾದ ಪ್ರಮಾದ ! ತಿರುಗಣೆಗೆ ನೀರು ಚೆಲ್ಲಿದ್ದುದರಿಂದ ನನ್ನ ಕೈ ತಣ್ಣಗಾಯಿತು. ಇರಲಿ ಕೈಯ್ಯನ್ನು ಕಂಕುಳಲ್ಲಿಟ್ಟು ಸ್ವಲ್ಪ ಬೆಚ್ಚಗೆ ಮಾಡಿಕೊಂಡು ಅನಂತರ ತೆಗೆದುಕೊಳ್ಳುವೆನು. (ಕಂಕುಳಲ್ಲಿ ಕೈಯ್ಯನ್ನಿಟ್ಟು, ತೆಗೆದು, ಒಡವೆಗಳನ್ನು ತೆಗೆದುಕೊಳ್ಳುವನು.)

ವಿದೂಷಕ—ತೆಗೆದುಕೊಂಡೆಯಾ ?

ಶರ್ವಿಳಕ—ಬ್ರಾಹ್ಮಣನ ಮಾತನ್ನು ಮೀರಕೂಡದು. ಆದುದರಿಂದ ತೆಗೆದುಕೊಂಡೆನು.

ವಿದೂಷಕ—ಇನ್ನುಮೇಲೆ ನಾನು ಸುಖವಾಗಿ ನಿದ್ರೆಮಾಡುವೆನು.

ಶರ್ವಿಳಕ—ಬ್ರಾಹ್ಮಣನೆ, ನೂರುವರ್ಷ ಪರ್ಯಂತರವೂ, ಹೀಗೆಯೇ ಮಲಗಿ ನಿದ್ದೆಮಾಡು. ಪ್ರಕೃತದಲ್ಲಿ ನಾನು, ಆ ಮದನಿಕೆಗಾಗಿ ಇಂತಹ ಅಕಾರ್ಯವನ್ನು ಮಾಡಿ, ಬ್ರಾಹ್ಮಣ ಕುಲವನ್ನೇ ಹಾಳುಮಾಡಿದೆನು. ಅಥವಾ ನಾನೇ ಕೆಟ್ಟೆನು. ಇನ್ನು ಜಾಗ್ರತೆಯಾಗಿ ವಸಂತಸೇನೆಯ ಮನೆಗೆ ಹೋಗಿ ಅವಳಿಗೆ ಕೊಡಬೇಕಾದ ಹಣವನ್ನು ಕೊಟ್ಟು ಮದನಿಕೆಯನ್ನು ಬಿಡಿಸಿಕೊಂಡು ಬರುವೆನು. (ಹೊರಟು ಹಾಗೆಯೇ ನಿಂತು) ಏನು ! ಹಜ್ಜೆಯ ಸದ್ದಾಗುವುದು ! ಬಿಲ್ಲೆಯವರಲ್ಲವಷ್ಟೆ ! ಆಗಲಿ ಅಲ್ಲಾಡದೆ ಸ್ತಂಭದಂತೆ ನಿಲ್ಲುವೆನು.

ರದನಿಕೆ—(ಬಂದು) ಅಯ್ಯೋ ! ಇನ್ನೇನುಗತಿ ! ವರ್ಧಮಾನಕನು ಬೀದಿಯ ಜಗುಲಿಯಮೇಲೆ ಮಲಗಿರುವ ಪದ್ಧತಿಯುಂಟು. ಅವನೂ ಇಲ್ಲವಲ್ಲಾ ! ಆಗಲಿ, ಆರ್ಯ ಮೈತ್ರೇಯನನ್ನಾದರೂ ಕೂಗಿ ಎಬ್ಬಿಸುವೆನು. (ಮುಂದಕ್ಕೆ ಬರುವಳು.)

ಶರ್ವಿಳಕ—(ರದನಿಕೆಯನ್ನು ನೋಡಿ) ಈಗ ಇವಳನ್ನು ಕೊಲ್ಲಲೇ? ಏನೋ ಹೆಂಗಸು. ಇವಳನ್ನೇಕೆ ಕೊಲ್ಲಬೇಕು? ಹೊರಟು ಹೋಗುವೆನು. (ಎಂದು ಓಡಿಹೋಗುವನು.)

ರದನಿಕೆ—(ಭಯದಿಂದ) ಅಯ್ಯಾ! ಮೈತ್ರೇಯನೆ, ಏಳುಏಳು. ನಮ್ಮ ಮನೆಗೆ ಕಳ್ಳನು ಕನ್ನಹಾಕಿ ಓಡಿಹೋದನು.

ವಿದೂಷಕ—(ಗಾಬರಿಯಿಂದೆದ್ದು) ಏನೆಂದೆ? ಕನ್ನ ಕಳ್ಳಹಾಕಿ ಓಡಿಹೋಯಿತೆ?

ರದನಿಕೆ—ಸಾಕುಸಾಕು, ಹಾಸ್ಯಮಾಡಬೇಡ, ನೀನು ಇದನ್ನು ನೋಡಲಿಲ್ಲವೆ?

ವಿದೂಷಕ—ಅಯ್ಯಾ, ಚಾರುದತ್ತನೆ, ಏಳುಏಳು; ಕಳ್ಳನು ನಮ್ಮ ಮನೆಗೆ ಕನ್ನವನ್ನು ಹಾಕಿ ಓಡಿಹೋದನು.

ಚಾರುದತ್ತ—ಅಯ್ಯಾ, ಇರಲಿ ಹಾಸ್ಯಮಾಡಬೇಡ.

ವಿದೂಷಕ—ಹಾಸ್ಯವಲ್ಲ. ನೀನೇನೋಡು.

ಚಾರುದತ್ತ—(ಎದ್ದು) ಯಾವಸ್ಥಳದಲ್ಲಿ?

ವಿದೂಷಕ—ಇದೊ ಇಲ್ಲೇ.

ಚಾರುದತ್ತ—(ನೋಡಿ ಸ್ವಗತ) ಆಃ ಈ ಕನ್ನವು ಎಷ್ಟು ಮನೋಹರವಾಗಿರುವುದು. ಇದರಲ್ಲಿಯೂ ಒಂದು ಕೌಶಲವಿರಬಹುದು. ಹಾಕಿದವನು ಎಷ್ಟು ಬುದ್ಧಿವಂತನೊ? ಎಷ್ಟು ದೊಡ್ಡಮನುಷ್ಯನೊ? (ಬಂದುನೋಡಿ) ಬಹು ಪ್ರಯಾಸಪಟ್ಟು ಕನ್ನಹಾಕಿರುವನು, ಏನೂ ಸಿಕ್ಕಲಿಲ್ಲವಲ್ಲಾ! ಅಯ್ಯೋಪಾಪ! ಅವನು ದೊಡ್ಡಸಾಹುಕಾರನ ಮನೆಗೆ ಕನ್ನಹಾಕಿದನು. ಅಲ್ಲಿ ಅವನಿಗೇನೂ ಸಿಕ್ಕಲಿಲ್ಲ—ಎಂದು ತನ್ನಸ್ನೇಹಿತರ ಮುಂದೆ ಲಜ್ಜೆಯಿಲ್ಲದೆ ಹೇಗೆತಾನೆ ಹೇಳಿಯಾನು.

ವಿದೂಷಕ—ಮಿತ್ರನೆ, ಸುಮ್ಮನೆ ಏತಕ್ಕೆ ಆ ಕಳ್ಳನನ್ನು ಶ್ಲಾಘಿಸುವೆ. ಇದು ದೊಡ್ಡಮನೆ! ಚಿನ್ನದಗಂಟೋ ರತ್ನದಗಂಟೋ, ಸಿಕ್ಕುವುದು—ಎಂದು ಇಲ್ಲಿಗೆಬಂದ. ಏನೂ ಇಲ್ಲದೆ ಹೊರಟುಹೋಗಬೇಕಾಯಿತು. (ಸ್ವಗತ) ಅದು ಸರಿ. ನನ್ನಕೈಗೆ ಕೊಟ್ಟಿದ್ದ ಒಡವೆಯಗಂಟು ಏನಾಯಿತು? (ಯೋಚಿಸಿ) ಆಃ ಈಗ ಜ್ಞಾಪಕಕ್ಕೆ ಬಂತು. ಚಾರುದತ್ತನ ಕೈಗೆ

ಕೊಟ್ಟೆನು. (ಪ್ರಕಾಶ) ಅಯ್ಯಾ, "ಮೈತ್ರೇಯನು ಮೂರ್ಖ! ಬುದ್ಧಿವಂತನಲ್ಲ" ಎಂದು ಪದೇಪದೇ ನನ್ನನ್ನು ನಿಂದಿಸುತ್ತಿದ್ದೆ, ನಾನು ಜಾಣನಾದುದರಿಂದ ರಾತ್ರಿಯೇ ಒಡವೆಯ ಗಂಟನ್ನು ನಿನ್ನಕೈಗೆ ಕೊಟ್ಟೆನು, ಇಲ್ಲದಿದ್ದರೆ ಕಳ್ಳನು ಅಪಹರಿಸಿಕೊಂಡು ಹೋಗುತ್ತಿದ್ದನು.

ಚಾರುದತ್ತ—ಸುಮ್ಮನೆ ಏತಕ್ಕೆ ಹಾಸ್ಯಮಾಡುವೆ?

ವಿದೂಷಕ—ಇಂತಹ ಸಮಯದಲ್ಲಿ ಹಾಸ್ಯವೆ?

ಚಾರುದತ್ತ—ಹಾಗಾದರೆ ಯಾವಾಗ ಕೊಟ್ಟೆ?

ವಿದೂಷಕ—ನಿನ್ನ ಕೈ ತಣ್ಣಗಿದೆ, ಎಂದು ಹೇಳಿದನಲ್ಲಾ ಆಗ ನಾನು ಕೊಟ್ಟುದು.

ಚಾರುದತ್ತ—ಏನು, ನಿಜವಾಗಿ ನನ್ನವಶಕ್ಕೆ ಕೊಟ್ಟೆಯಾ?

ವಿದೂಷಕ—ನಿಜವಾಗಿಯೂ ಕೊಟ್ಟೆನು, ನಮ್ಮಪ್ಪನಾಣೆಗೂ ಕೊಟ್ಟೆನು. ನೀನು ತೆಗೆದುಕೊಳ್ಳುವಾಗ ನಿನ್ನ ಕೈ ತಣ್ಣಗಿದೆ—ಎಂದು ಹೇಳಿಕೊಟ್ಟೆನಲ್ಲಾ! ಈಗಲಾದರೂ ಜ್ಞಾಪಕ ಬಂತೆ?

ಚಾರುದತ್ತ—ಏನೋ, ಇರಬಹುದೇನೊ! ಹಾಗಾದರೆ ಕಳ್ಳನು ಕದ್ದುಕೊಂಡುಹೋದನು.

ವಿದೂಷಕ—ಅದಕ್ಕೆ ನಾವು ಸಂತೋಷಪಡಬೇಕಯ್ಯಾ. ಬಂದ ಕಳ್ಳನು ನಿಷ್ಫಲವಾಗಿ ಹೋಗಲಿಲ್ಲವಷ್ಟೆ?

ಚಾರುದತ್ತ—ಅದು ನನ್ನದಾಗಿದ್ದರೆ ಹಾಗೆಯೇಸರಿ. ಕಂಡವರ ಒಡವೆ ವ್ಯರ್ಥವಾಗಿ ಹೋಯಿತಲ್ಲಾ. (ಎಂದು ಮೂರ್ಛೆಹೋಗುವನು.)

ವಿದೂಷಕ—ಅಯ್ಯಾ, ಮಿತ್ರನೆ, ಸಮಾಧಾನಮಾಡಿಕೊ, ಕಂಡವರ ಒಡವೆಯನ್ನು ಕಳ್ಳನು ತೆಗೆದುಕೊಂಡುಹೋದರೆ ನೀನೇಕೆ ವ್ಯಸನಪಡಬೇಕು?

ಚಾರುದತ್ತ—(ಸಂತವಿಸಿಕೊಂಡು) ಮಿತ್ರನೆ, ನಮಗಿಂತಹ ಬಡತನ ಬಂದಕಾಲದಲ್ಲಿ, ಕಳ್ಳರು ಒಡವೆಯ ಗಂಟನ್ನು ಕದ್ದುಕೊಂಡು ಹೋದರೆಂದರೆ ಯಾರುತಾನೇ ನಂಬಿಯಾರು. ಅಯ್ಯೋ ಕಷ್ಟಕಷ್ಟ. ಕ್ರೂರವಾದ ದೈವವು ನನ್ನ ಐಶ್ವರ್ಯವನ್ನು ಮಾತ್ರ ಅಪಹರಿಸಿತ್ತು. ಈಗ ಯಶಸ್ಸನ್ನೂ ಅಪಹರಿಸಿತಲ್ಲಾ!

ವಿದೂಷಕ—ಅಯ್ಯಾ, ಏಕಿಷ್ಟು ಅಧೈರ್ಯಪಡುವೆ? ಕೊಟ್ಟವರಾರು? ತೆಗೆದುಕೊಂಡವರಾರು? ಸಾಕ್ಷಿಯಾರು? ಎಂದು ನಾನು ಬಾಯಿ ಬಡಿಯುವೆನು.

ಚಾರುದತ್ತ—ಮೈತ್ರೇಯನೆ, ಭಿಕ್ಷವನ್ನಾದರೂ ಮಾಡಿ ಆ ಪದಾರ್ಥಕ್ಕೆ ತಕ್ಕ ಹಣವನ್ನು ಕೊಡುವೆನೇ ಹೊರತು ನಾನೆಂದಿಗೂ ಸುಳ್ಳಾಡುವುದಿಲ್ಲ.

ವಿದೂಷಕ—ಸುಳ್ಳಿಲ್ಲದಿದ್ದರೆ ಈ ಕಾಲದಲ್ಲಿ ಬದುಕುವುದೇ ಕಷ್ಟ.

ಧೂತಾದೇವಿ—(ರದನಿಕೆಯೊಡನೆ ಬಂದು) ಆರ್ಯಪುತ್ರನಿಗೂ ಮೈತ್ರೇಯನಿಗೂ ಏನೂ ಘಾಸಿಯಾಗಲಿಲ್ಲವಷ್ಟೆ?

ರದನಿಕೆ—ನಿಶ್ಚಯವಾಗಿಯೂ ಏನೂ ಇಲ್ಲ. ಆದರೆ ವಸಂತಸೇನೆಯ ಒಡವೆಮಾತ್ರ ಹೋಯಿತು.

ಧೂತಾದೇವಿ—ಅಯ್ಯೋ! ಇನ್ನೇನುಗತಿ (ಮೂರ್ಛೆ ಬೀಳುವಳು.)

ರದನಿಕೆ—ಆರ್ಯೆ, ಸಂತೈಸಿಕೊ, ಸಂತೈಸಿಕೊ.

ಧೂತಾದೇವಿ—

ಪಟ್ಟು ॥ ರಾಗ ॥ ಮಾಂಡ್ ॥ ತಾಳ ॥

ದೈವೇಚ್ಛೆಯಂ ಕಾಂಬರಾರ್ ।
ನಾವೈಸಲೇ ಪುಣ್ಯಹೀನರು ॥ ಪ ॥
ಆಸೆಯೊಳನ್ಯರ ವಸ್ತುವನಾಂತೂ ಮೋಸಗೈವರೇ ॥
ಲೇಸಾಗದೆಂಬರೆಲ್ಲರೂ । ನಾವೈಸಲೇ ಪುಣ್ಯಹೀನರೂ ॥ ೧ ॥

(ನಿಟ್ಟುಸಿರುಬಿಟ್ಟು) ರದನಿಕೆ, ಬಡತನದಿಂದ ಕೊಟ್ಟಿದ್ದ ಒಡವೆಗೆ ಮೋಸ ಮಾಡಿದರೆಂದು ಈ ಉಜ್ಜಯಿನಿಯಲ್ಲಿ ಇರುವ ಜನರೆಲ್ಲರೂ ಆಡಿಕೊಳ್ಳುವ ಹಾಗಾಯಿತಲ್ಲಾ. (ನಿಟ್ಟುಸಿರು ಬಿಟ್ಟು) ಆಹಾ! ದೈವವೆ, ನಮಗಿಂತಹ ದುರ್ದಶೆಯನ್ನು ಕೊಟ್ಟೆಯಾ? ನಮ್ಮ ತಾಯಿಯ ಮನೆಯಲ್ಲಿ ಮುತ್ತಿನ ಹಾರವನ್ನು ಕೊಟ್ಟಿರುವರು; ಒಂದುವೇಳೆ ನಾನಿದನ್ನು ಕೊಟ್ಟರೂ ಆರ್ಯಪುತ್ರನು ತೆಗೆದುಕೊಳ್ಳುವನೋ ಇಲ್ಲವೋ? ಮೈತ್ರೇಯನೆ,

ವಿದೂಷಕ—(ಬಂದು) ನಿನಗೆ ಶುಭವಾಗಲಿ, ಮತ್ತೇನು?

ಧೂತಾದೇವಿ—ನಾನು ರತ್ನಷಷ್ಠೀವ್ರತೋಪಾಸವನ್ನು ಮಾಡಿದ್ದೆನು. ಆದುದರಿಂದ ಬ್ರಾಹ್ಮಣನಿಗೆ ಹಾರವನ್ನು ದಾನಕೊಡಬೇಕಾಗಿತ್ತು. ಈಗ ಅದಕ್ಕೆ ತಕ್ಕ ಸಮಯ ; ಈ ರತ್ನಹಾರವನ್ನು ತೆಗೆದುಕೊ.

ವಿದೂಷಕ—(ತೆಗೆದುಕೊಂಡು)• ನಿನಗೆ ಮಂಗಳವಾಗಲಿ. ನಾನು ಹೋಗಿ ಮಿತ್ರನಾದ ಚಾರುದತ್ತನಿಗೆ ತಿಳಿಸುವೆನು.

ಧೂತಾದೇವಿ—ನಾನು ಲಜ್ಜೆಪಡುವಹಾಗೆ ಮಾತ್ರ ಮಾಡಬೇಡ. (ಎಂದು ಹೋಗುವಳು.)

ವಿದೂಷಕ—ಆಹಾ ! ಈಕೆ ಎಂತಹ ಮಹಾತ್ಮಳು !

ಚಾರುದತ್ತ—ಮೈತ್ರೇಯನೇಕೆ ಇನ್ನೂ ಬರಲಿಲ್ಲ. ಮೈತ್ರೇಯ, ಮೈತ್ರೇಯ.

ವಿದೂಷಕ—ಬಂದೆ, ಈ ಹಾರವನ್ನು ತೆಗೆದುಕೊ. (ಕೊಡುವನು.)

ಚಾರುದತ್ತ—(ನೋಡಿ) ಏನಿದು ?

ವಿದೂಷಕ—ಇದು ನಿನಗೆ ಅನುಗುಣೆಯಾದ ಪತ್ನಿಯು ದೊರೆತಿರುವುದರ ಫಲ.

ಚಾರುದತ್ತ—ಏನು ! ದೇವಿಗೆ ನನ್ನಲ್ಲಿ ದಯೆಯುಂಟಾಯಿತೆ ? ಈಗಲೀಗ ನಾನು ನಿಜವಾಗಿಯೂ ದರಿದ್ರನಾದೆನು. ಲೋಕದಲ್ಲಿ ತನ್ನ ಸಂಪತ್ತನ್ನು ಹಾಳುಮಾಡಿಕೊಂಡು, ಸ್ತ್ರೀದ್ರವ್ಯದಿಂದ ಜೀವಿಸುವನು ಪುರುಷನಾದರೂ ಸ್ತ್ರೀಯೇ ಸರಿ ; ಅಥವಾ ನಾನು ದರಿದ್ರನಲ್ಲ. ಏಕೆಂದರೆ,

ಕಂ ‖ ಸಿರಿಯಂ ಪರಿಗಣಿಸದ ಸತಿ ।
ವರಮಿತ್ರಂ ಕಷ್ಟಮೆಣಿಸದಂ ನಿನ್ನನ್ನಂ ‖
ಸುರುಚಿರ ಸತ್ಯವ್ರತಮುಂ ।
ದರಿದ್ರನಾದಂಗದೆಂತು ಕರವಶಮಕ್ಕುಂ ‖

ಮೈತ್ರೇಯನೆ, ಈ ರತ್ನಹಾರವನ್ನು ತೆಗೆದುಕೊಂಡುಹೋಗಿ ನೀನಿಟ್ಟಿದ್ದ ಒಡವೆಯ ಗಂಟನ್ನು ನಮ್ಮವೆಂದು ತಿಳಿದು ಜೂಜಿನಲ್ಲಿ ಸೋತುಬಿಟ್ಟೆವು. ಆದುದರಿಂದ ಅದಕ್ಕೆ ಪ್ರತಿಯಾಗಿ ಈ ರತ್ನಹಾರವನ್ನು ಕೊಟ್ಟು ಬಾರೆಂದು ಚಾರುದತ್ತನು ಹೇಳಿರುವನು—ಎಂದು ಆ ವಸಂತಸೇನೆಗೆ ಹೇಳಿ, ಹಾರವನ್ನು ಕೊಟ್ಟು ಬಾ.

ವಿದೂಷಕ—ತಿಂದುದಲ್ಲ, ಉಂಡುದಲ್ಲ. ಸ್ವಲ್ಪ ಬೆಲೆಯದು. ಅದೂ ಕಳ್ಳರು ಕದ್ದುಕೊಂಡುಹೋದುದು. ಅದಕ್ಕೆ ಲೋಕೋತ್ತರವಾದ ಈ ರತ್ನಹಾರವನ್ನು ಕೊಡುವುದೆಂದರೇನು ? ಬೇಡಬೇಡ.

ಚಾರುದತ್ತ—ಅಯ್ಯಾ, ಹಾಗೆ ಹೇಳಬೇಡ. ಇದನ್ನು ಕೊಡುವುದು ಒಡವೆಗೋಸ್ಕರವಲ್ಲ. ಅವಳು ಯಾವ ನಂಬಿಕೆಯಿಂದ ನಮ್ಮ ಕೈಗೆ ಕೊಟ್ಟಿದ್ದಳೋ ಆ ನಂಬಿಕೆಗಾಗಿ. ಆದುದರಿಂದ ಈ ಒಡವೆಯನ್ನು ವಸಂತಸೇನೆಗೆ ಕೊಟ್ಟು ಬಂದರೆ ಸರಿ. ಇಲ್ಲದಿದ್ದರೆ ನನ್ನಮೇಲೆ ಆಣೆಯಿದೆ.

ವಿದೂಷಕ—ಅಪ್ಪಣೆಯ ಪ್ರಕಾರ. (ಎಂದು ಹೋಗುವನು.)

ಇದು
ಸಂಧಿಭೇದವೆಂಬ ಮೂರನೆಯಂಕಂ

———

# ನಾಲ್ಕನೆಯಂಕಂ

———

(ವಸಂತಸೇನೆ ಮದನಿಕೆಯೊಡನೆ ಪ್ರವೇಶಿಸುವಳು.)

ವಸಂತಸೇನೆ—

॥ ರಾಗ ॥ ॥ ತಾಳ ॥

ರಾಜಿಪನೀ ಪ್ರಾಣಾಧಾರಾ । ಮನೋಹಾರಾ । ಸದಾಸೌಖ್ಯಾ
ಕಾರಾ । ವನೇಜಾಸ್ತ್ರಾಧಾರಾ । ಮನೋಹಾರಾ ॥ ಅ ॥
ನಿತ್ಯಾನಂದಯುತಾ । ನಿರುಪಾಧಿಕ ಚರಿತಾ । ಸುರುಚಿರ ಸುಗು
ಣಯುತಾ । ಸುಂದರತಾ । ಪ್ರಖ್ಯಾತಾ ॥ ೧ ॥

ಸಖಿ, ಮದನಿಕೆ, ಚಾರುದತ್ತನ ಈ ಭಾವಚಿತ್ರವು ಎಷ್ಟು ಚೆನ್ನಾಗಿರುವುದು !

ಮದನಿಕೆ—ಬಲು ಚೆನ್ನಾಗಿರುವುದು.

ವಸಂತಸೇನೆ—ಚೆನ್ನಾಗಿರುವುದೆಂದು ನೀನು ಹೇಗೆ ತಿಳಿದೆ?

ಮದನಿಕೆ—ಪ್ರೀತಿಪೂರ್ವಕವಾಗಿ ನೀನು ನೋಡುತ್ತಿದ್ದುದರಿಂದಲೇ ಗೊತ್ತಾಯಿತು.

ವಸಂತಸೇನೆ—ಸೂಳೆಗೇರಿಯಲ್ಲಿ ಇರುವುದರಿಂದ ಹೀಗೆ ಹೇಳುವೆಯೋ ?

ಮದನಿಕೆ—ಆರ್ಯೆ, ಇದೇನು ಹೀಗೆ ಹೇಳುವೆ! ಸೂಳೆಗೇರಿಯಲ್ಲಿರತಕ್ಕವರೆಲ್ಲರೂ ಸುಳ್ಳಾಡುವರೆ?

ವಸಂತಸೇನೆ—ಮದನಿಕೆ, ಅನೇಕ ಪುರುಷರ ಸಂಬಂಧದಿಂದ ಸೂಳೆಯರಿಗೆ ಸುಳ್ಳಾಡುವುದೂ, ಮೋಸಮಾಡುವುದೂ ತಮಗೆ ತಾವೇ ಬರುವುವು.

ಚೇಟಿ—(ಬಂದು) ಆರ್ಯೆ, ರಥವು ಸಿದ್ಧವಾಗಿರುವುದು. ಹೊರಡಬೇಕೆಂದು ನಿಮ್ಮ ತಾಯಿ ಅಪ್ಪಣೆಕೊಟ್ಟಿರುವಳು.

ವಸಂತಸೇನೆ—ಏನು ! ಆರ್ಯ ಚಾರುದತ್ತನು ಕಳುಹಿಸಿರುವನೋ?

ಚೇಟಿ—ಅಲ್ಲ ಅಲ್ಲ, ಮತ್ತೊಬ್ಬನು ಹತ್ತುಸಾವಿರ ವರಹಗಳೊಡನೆ ಕಳುಹಿಸಿರುವನು.

ವಸಂತಸೇನೆ—ಅವನಾರು ?

ಚೇಟಿ—ರಾಜಶಾಲಕನಾದ ಶಕಾರನಿರುವನಷ್ಟೆ ? ಅವನು.

ವಸಂತಸೇನೆ—(ಕೋಪದಿಂದ) ಚಿಃ ! ಚಿಃ ! ಹೋಗು. ನನ್ನಿದಿರಾಗಿ ನಿಲ್ಲಬೇಡ. ಪುನಃ ಇಂತಹ ಮಾತನ್ನಾಡಿದೆಯಾದರೆ ನಾನು ಸುಮ್ಮನಿರುವವಳಲ್ಲ.

ಚೇಟಿ—ಆರ್ಯೆ, ಕ್ಷಮಿಸು ಕ್ಷಮಿಸು. ನಿಮ್ಮ ತಾಯಿ ಆಜ್ಞೆಯನ್ನು ನಾನು ತಿಳಿಸಿದೆನು.

ವಸಂತಸೇನೆ—ಅವಳ ಆಜ್ಞೆಗಾಗಿಯೇ ನಾನು ಕೋಪಿಸಿಕೊಂಡುದು.

ಚೇಟಿ—ಆದರೆ ನಿಮ್ಮ ತಾಯಿಗೆ ನಾನು ಏನೆಂದು ವಿಜ್ಞಾಪಿಸಲಿ ?

ವಸಂತಸೇನೆ—ನಾನು ಬದುಕಿರಬೇಕೆಂಬ ಅಪೇಕ್ಷೆ ನಿನಗಿದ್ದರೆ ಪುನಃ ಹೀಗೆ ಆಜ್ಞಾಪಿಸಬೇಡವೆಂದು ವಿಜ್ಞಾಪಿಸು.

ಚೇಟಿ—ಅಪ್ಪಣೆಯ ಪ್ರಕಾರ. (ಎಂದು ಹೋಗುವಳು.)

ವಸಂತಸೇನೆ—ಮದನಿಕೆ, ಈ ಭಾವಚಿತ್ರವನ್ನು ತೆಗೆದುಕೊಂಡು ಹೋಗಿ, ನನ್ನ ಶಯ್ಯಾಗೃಹದಲ್ಲಿರಿಸಿ ಜಾಗ್ರತೆಯಾಗಿ ಬೀಸಣಿಗೆಯನ್ನು ತೆಗೆದುಕೊಂಡು ಬಾ.

ಮದನಿಕೆ—ಅಪ್ಪಣೆ. (ಎಂದು ಹೋಗುವಳು.)

ವಸಂತಸೇನೆ—(ಉಪ್ಪರಿಗೆಯಮೇಲೆ ಕುಳಿತು)

ರಾಗ ॥ ಜುಂಜೋಟಿ ॥

ಸುಮಶರನೇ ನಿನಗೀ ಸಾಸವೇಪಾಪೀ ॥ ಪ ॥
ಕಾಂತನವಿರಹದಿ।ಚಿಂತಿಸುತಾಬಲು।ಭ್ರಾಂತಳಾದೀ ನಾರಿ
ಯುಲ್ಲಿ।ಪಂತವ।ನಾಂತುನೀ।ಕಂತುವೇ।ಇಂತು ಬಾಧಿಪೇ ॥ ೧ ॥
ಸ್ತ್ರೀಯರ ಹೃದಯವ।ನೋಯಿಪುದೇನಿದು!ತೋಯಜಾಸ್ತ್ರ
ಧಾರೆಯಿಂದ।ಸಾಯುದೇ।ನೋಯುದೇ।ಮಾಯುದೇ।ನೀಯೆದೆಯಾಂತು ॥ ೨ ॥

ಶರ್ವಿಳಕ—(ಉಪ್ಪರಿಗೆಯ ಕೆಳಭಾಗದಲ್ಲಿ ಪ್ರವೇಶಿಸಿ) ಆ ಮದನಿಕೆ ಗೋಸ್ಕರ ನೆನ್ನೆ ರಾತ್ರಿ ಬಹಳ ಸಾಹಸಕಾರ್ಯವನ್ನು ಮಾಡಿದೆನು. ಇದೇ ಆ ವಸಂತಸೇನೆಯ ಮನೆ. ಇವಳ ಮನೆಯಲ್ಲಿ ಮದನಿಕೆ ಎಲ್ಲಿರುವಳೋ ಕಾಣೆನಲ್ಲಾ.

(ಮದನಿಕೆಯು ಬೀಸಣಿಗೆಯನ್ನು ತರುತ್ತಿರುವಳು).

ಶರ್ವಿಳಕ—ಇದೊ, ಮದನಿಕೆ ಇಲ್ಲೆ ಬರುತ್ತಿರುವಳು.

ಮದನಿಕೆ—(ನೋಡಿ) ಏನು ಶರ್ವಿಳಕನೋ ? ಎಲ್ಲಿಂದ ಬಂದೆ ?

ಶರ್ವಿಳಕ—ಹೇಳುವೆನು. (ಇಬ್ಬರೂ ಪರಸ್ಪರ ನೋಡುವರು).

ವಸಂತಸೇನೆ—ಏಕೋ ಇಷ್ಟು ಹೊತ್ತಾದರೂ ಮದನಿಕೆ ಬರಲಿಲ್ಲ. ಎಲ್ಲಿದ್ದಾಳು ? (ಗವಾಕ್ಷವನ್ನು ತೆರೆದುನೋಡಿ) ಅತಿ ಪ್ರೇಮದಿಂದ ಯಾವನೋ ಒಬ್ಬ ಪುರುಷನೊಡನೆ ಮಾತನಾಡುತ್ತಿರುವಳು. ಪ್ರಾಯಶಃ ಈ ಪುರುಷನು ಇವಳ ಸೇವಾವೃತ್ತಿಯನ್ನು ತಪ್ಪಿಸುವೆನೆಂದು ಹೇಳಿರ ಬಹುದು ; ಸುಖವಾಗಿರಲಿ. ನಾವು ಯಾರ ಸಂತೋಷಕ್ಕೂ ಭಂಗವಾಡ ಬಾರದು.

ಮದನಿಕೆ—ಶರ್ವಿಳಕನೆ, ಹೇಳು ಹೇಳು.

ಶರ್ವಿಳಕ—(ಭಯದಿಂದ ಸುತ್ತಲೂ ನೋಡುವನು.)

ಮದನಿಕೆ—ನೀನೇತಕ್ಕೆ ಭಯಪಡುವೆ ?

ಶರ್ವಿಳಕ—ನಿನ್ನ ಸಂಗಡ ಒಂದು ರಹಸ್ಯವನ್ನು ಹೇಳಬೇಕು. ಇಲ್ಲಿ ಯಾರೂ ಇಲ್ಲವಷ್ಟೆ ?

ಮದನಿಕೆ—ಇಲ್ಲ, ಇಲ್ಲ.

ವಸಂತಸೇನೆ—ಏನೋ ರಹಸ್ಯವಂತೆ. ನಾನೇಕೆ ಕೇಳಲಿ ?

ಶರ್ವಿಳಕ—ಮದನಿಕೆ, ನೀನು ವಸಂತಸೇನೆಗೆ ಕೊಡಬೇಕಾದ ಹಣವನ್ನು ಕೊಟ್ಟರೆ ಆಕೆ ನಿನ್ನನ್ನು ಬಿಟ್ಟಾಳೆ ?

ವಸಂತಸೇನೆ—ಇದೇನೋ ನನ್ನ ಪ್ರಸ್ತಾಪವೇ ನಡೆಯುತ್ತಿರು ವುದು. ಆದುದರಿಂದ ಈ ಗವಾಕ್ಷದಲ್ಲಿ, ಮರೆಯಾಗಿ ನಿಂತು ಕೇಳುವೆನು.

ಮದನಿಕೆ—ಶರ್ವಿಳಕ, ಹಣವನ್ನು ಕೊಟ್ಟರೆ ನನ್ನನ್ನು ಬಿಟ್ಟು ಕೊಡುವೆಯಾ—ಎಂದು ವಸಂತಸೇನೆಯನ್ನು ನಾನು ಕೇಳಿಕೊಂಡರೆ,

ನನ್ನ ಮನಸ್ಸುಬಂದರೆ ಹಣವನ್ನು ಕೊಡದಿದ್ದರೂ ಬಿಡುವೆನೆಂದು ಆಕೆ ಹೇಳಿಯಾಳು. ಅದು ಸರಿ; ನನ್ನನ್ನು ಬಿಡಿಸಿಕೊಂಡು ಹೋಗುವಷ್ಟು ಹಣ ನಿನಗೆಲ್ಲಿ ಬಂತು ?

ಶರ್ವಿಳಕ—ನಿನ್ನಲ್ಲಿ ನನಗೆ ಬಹಳ ಪ್ರೇಮವಿರುವುದು. ಕೊಡಬೇಕಾದ ಹಣಕ್ಕೆ ಮಾತ್ರ ಗತಿಯಿಲ್ಲ. ಆದುದರಿಂದ ನಿನಗೋಸ್ಕರ ನೆನ್ನೆ ರಾತ್ರಿ ತುಂಬಾ ಸಾಹಸವನ್ನು ಮಾಡಿದೆನು.

ವಸಂತಸೇನೆ—ಈತನ ಮುಖವನ್ನು ನೋಡಿದರೆ ಬಹು ಸೌಮ್ಯವಾಗಿರುವುದು. ಸಾಹಸಕಾರ್ಯವೆಂದರೆ ಭಯವುಂಟಾಗುವುದು.

ಮದನಿಕೆ—ಸ್ತ್ರೀಗೋಸ್ಕರ ಎರಡನ್ನೂ ಕೆಡಿಸಿಕೊಂಡೆಯಲ್ಲಾ.

ಶರ್ವಿಳಕ—ಅವಾವುದನ್ನು ?

ಮದನಿಕೆ—ಶರೀರವನ್ನೂ, ಯಶಸ್ಸನ್ನೂ.

ಶರ್ವಿಳಕ—ಮೂಢಳೆ, ನಿನಗೆ ತಿಳಿಯದು. ಸಾಹಸ ಮಾಡದಿದ್ದರೆ ದ್ರವ್ಯ ಹೇಗೆ ಲಭಿಸೀತು ?

ಮದನಿಕೆ—ನೀನು ಇದುವರೆಗೂ ಬಹಳ ಯಶೋವಂತನಾಗಿದ್ದೆ. ಈಗ ನನಗಾಗಿ ಇಂತಹ ಸಾಹಸಕಾರ್ಯವನ್ನು ಮಾಡಿದುದು ಬಹಳ ಅಸಂಗತವು.

ಶರ್ವಿಳಕ—ಹಾಗೆನ್ನಬೇಡ. ನಾನು ಒಡವೆಯಾಸೆಯಿಂದ ಅಲಂಕಾರ ಮಾಡಿಕೊಂಡಿರುವ ಸ್ತ್ರೀಯನ್ನು ಅಪಹರಿಸಿದವನಲ್ಲ. ಬ್ರಾಹ್ಮಣನ ಸ್ವತ್ತಿಗೆ ಆಸೆಪಟ್ಟವನಲ್ಲ. ಮಕ್ಕಳ ಮೇಲಿದ್ದ ಒಡವೆಗಳನ್ನು ಕದ್ದುಕೊಂಡು ಅವರಿಗೊಂದು ಅಪಾಯವನ್ನು ಬಗೆದವನಲ್ಲ. ಕಳ್ಳತನ ಮಾಡುವುದರಲ್ಲಿಯೂ ನನಗೆ ಯುಕ್ತಾಯುಕ್ತ ಪರಿಜ್ಞಾನವುಂಟು. ಆದುದರಿಂದ ಅಳತೆಕೊಟ್ಟು ಮಾಡಿಸಿರುವಂತೆ ಸರಿಯಾಗಿರುವ ಈ ಆಭರಣವನ್ನು ನನ್ನಲ್ಲಿ ವಿಶ್ವಾಸವಿಟ್ಟು ನೀನು ಧರಿಸಬೇಕು. ಆದರೆ ಯಾರಿಗೂ ತೋರಿಸದಂತೆ ಗುಟ್ಟಾಗಿಟ್ಟುಕೊಂಡಿರತಕ್ಕುದು—ಎಂದು ಆ ವಸಂತಸೇನೆಗೆ ವಿಜ್ಞಾಪಿಸು.

ಮದನಿಕೆ—ಇದೇನು ? ಗುಟ್ಟಾಗಿರತಕ್ಕುದೆಂದು ಹೇಳುವೆ ? ಎಲ್ಲಿ ಕೊಡು, ನೋಡೋಣ.

ಶರ್ವಿಳಕ—ಇದೊ, ತೆಗೆದುಕೊ. (ಭಯದಿಂದ ನಾಲ್ಕುಕಡೆಯೂ ನೋಡುತ್ತ ಕೊಡುವನು.)

ಮದನಿಕೆ—(ನೋಡಿ) ಈ ಒಡವೆಯನ್ನು ನಾನೆಲ್ಲೋ ನೋಡಿದ ಹಾಗಿದೆ. ಇದು ನಿನಗೆ ಎಲ್ಲಿಂದ ಬಂದಿತು ?

ಶರ್ವಿಳಕ—ಅದೆಲ್ಲಾ ನಿನಗೇಕೆ ? ತೆಗೆದುಕೊ.

ಮದನಿಕೆ—( ಕೋಪದಿಂದ ) ಇಷ್ಟು ತಿಳಿಸುವುದಕ್ಕೂ ನನ್ನಲ್ಲಿ ನಂಬಿಕೆಯಿಲ್ಲದ ಬಳಿಕ ನನ್ನನ್ನೇಕೆ ಬಿಡಿಸಿಕೊಳ್ಳಬೇಕು ?

ಶರ್ವಿಳಕ—ನಿನ್ನೊಡನೆ ವಂಚನೆಯೇನು. ನಾನು ಒಡವೆ ತಂದ ಮನೆಯು ಚಾರುದತ್ತನದೆಂದು ಮರುದಿನ ಕೇಳಿದೆನು.

(ವಸಂತಸೇನೆಯೂ, ಮದನಿಕೆಯೂ ಮೂರ್ಛೆಹೊಂದುವರು.)

ಶರ್ವಿಳಕ—ಮದನಿಕೆ, ಸಂತೈಸಿಕೊ, ಸಂತೈಸಿಕೊ. ನಿನ್ನನ್ನು ಬಿಡಿಸಿಕೊಂಡು ಹೋಗುವುದಕ್ಕೋಸ್ಕರ ನಾನು ಇಷ್ಟು ಸಾಹಸವನ್ನು ಮಾಡಿದೆನು. ಅಯ್ಯೋ ಪ್ರಾಣಿ ! ನನಗೋಸ್ಕರ ಇಷ್ಟು ಕಷ್ಟಪಟ್ಟೆಯಾ ? ಎಂದು ಸ್ವಲ್ಪವೂ ಕನಿಕರತೋರದೆ, ನೀನು ಹೀಗೆ ವಿಷಾದಪಡಬಹುದೆ ?

ಮದನಿಕೆ—ಅಲ್ಲಿ ಯಾರನ್ನೂ ಕೊಲ್ಲಲಿಲ್ಲವಷ್ಟೆ ?

ಶರ್ವಿಳಕ—ಈ ಶರ್ವಿಳಕನು ಭಯಪಟ್ಟವರನ್ನೂ, ಮಲಗಿರುವವರನ್ನೂ, ಎಂದಿಗೂ ಕೊಲ್ಲತಕ್ಕವನಲ್ಲ.

ಮದನಿಕೆ—ನಿಶ್ಚಯವೋ ?

ಶರ್ವಿಳಕ—ನಿಶ್ಚಯ.

ವಸಂತಸೇನೆ—ಅಹಾ ! ಈಗ ನಾನು ಬದುಕಿದೆನು.

ಮದನಿಕೆ—ಸಂತೋಷ ಸಂತೋಷ.

ಶರ್ವಿಳಕ—ಸತ್ಕುಲಪ್ರಸೂತನಾದ ನಾನು ನಿನಗೋಸ್ಕರವೇ ಇಂತಹ ಅಕಾರ್ಯವನ್ನು ಮಾಡಿದರೂ ಸ್ವಲ್ಪವೂ ಸಂತೋಷಪಡದೆ ಯಾರನ್ನೂ ಕೊಲ್ಲಲಿಲ್ಲವಷ್ಟೆ ? ಎಂದು ಮತ್ತೊಬ್ಬರ ಕ್ಷೇಮವನ್ನು ವಿಚಾರಿಸುವೆಯಲ್ಲಾ ! ಆಹ ! ಲೋಕದಲ್ಲಿ ಸ್ತ್ರೀಯರನ್ನು ನಂಬಬಾರದು. ಏಕೆಂದರೆ—

ಕಂ ॥ ಜಲಧಿತರಂಗದವೋಲ್ ಚಂ ।
ಚಲೆಯರ್ ಬಹು ಕಪಟಹೃದಯೆಯರ್ ಕಾಮಿನಿಯರ್ ॥

ಸೆಳೆದ್ಯೆದೆ ಪುರುಷನರ್ಥಮು ।
ನಲತಿಗೆಯಂ ಪಿಂಡಿ ಬಿಸುಡುವಂತಿರೆ ಕಳೆವರ್ ॥

ಇಷ್ಟುಮಾತ್ರವೇ ಅಲ್ಲ,

ಶ್ಲೋಕ॥ ಸ್ತ್ರೀಷು ನರಾಗಃ ಕಾರ್ಯೋರಕ್ತಂ ಪುರುಷಂ ಸ್ತ್ರಿಯಃಪರಿಭವಂತಿ ।
ರಕ್ತೈವಹಿ ರಂತವ್ಯಾ ವಿರಕ್ತಭಾವಾತುಹಾತವ್ಯಾ ॥

ಎಂದು ಕವಿಗಳು ಹೇಳಿರುವ ನೀತಿಯು ನನಗೆ ಈಗ ಚೆನ್ನಾಗಿ ಅನುಭವಕ್ಕೆ ಬಂದಿತು. (ಕೋಪದಿಂದ) ಆಹಾ ! ದುರಾತ್ಮನೆ, ಚಾರುದತ್ತನೆ, ಇದೆಲ್ಲಾ ನಿನ್ನ ಕೃತ್ರಿಮವೇ ಸರಿ ; ಇರಲಿ. ನಿನಗೆ ತಕ್ಕುದ್ದನ್ನು ಮಾಡುವೆನು. (ಎಂದು ಮೂರು ಹೆಜ್ಜೆಗಳನ್ನಿಡುವನು).

ಮದನಿಕೆ—(ಶರ್ವಿಳಕನನ್ನು ಹಿಡಿದು) ಯಾವುದೂ ತಿಳಿಯದೆ ಬಾಯಿಗೆ ಬಂದಂತೆ ಮಾತನಾಡುತ್ತಾ ಏಕೆ ಕೋಪಮಾಡುವೆ ?

ಶರ್ವಿಳಕ—ಅದೇನು ನನಗೆ ತಿಳಿಯದೆ ಇರುವುದು ?

ಮದನಿಕೆ—ಏನೆ ? ಈ ಒಡವೆಯು ವಸಂತಸೇನೆಯದೆಂಬ ಸಂಗತಿ.

ಶರ್ವಿಳಕ—ಅದು ಹೇಗೆ ?

ಮದನಿಕೆ—ಈ ಒಡವೆಯನ್ನು ವಸಂತಸೇನೆಯು ಚಾರುದತ್ತನ ಕೈಗೆ ಕೊಟ್ಟಿದ್ದಳು.

ಶರ್ವಿಳಕ—ಅಯ್ಯೋ ! ನಾನು ಈ ಕಾರ್ಯವನ್ನು ಮಾಡಿದುದು ಬಹಳ ಅಸಂಗತವಾಯಿತು.

ವಸಂತಸೇನೆ—ಇವನೂ ಸಂತಾಪಪಡುವಂತಿದೆ. ಆದುದರಿಂದ ಈ ಕಾರ್ಯವನ್ನು ತಿಳಿಯದೆ ಮಾಡಿದ್ದಾನು.

ಶರ್ವಿಳಕ—ಮೀರಿದ ಕಾರ್ಯಕ್ಕೆ ಈಗ ಏನು ಮಾಡಬೇಕು ? ಹೇಳು.

ಮದನಿಕೆ—ಈ ವಿಷಯದಲ್ಲಿ ನೀನೇ ಪಂಡಿತನು. ನೀನೇ ಹೇಳಬೇಕು.

ಶರ್ವಿಳಕ—ಹಾಗಲ್ಲ, ಕೇಳು ; ಸ್ತ್ರೀಯರು ಸ್ವಭಾವತಃ ಪಂಡಿತೆಯರು. ಪುರುಷರಿಗೆ ಶಾಸ್ತ್ರವನ್ನು ಅಭ್ಯಾಸಮಾಡಿದ ಹೊರತು ಪಾಂಡಿತ್ಯ ವುಂಟಾಗುವುದಿಲ್ಲ. ಆದುದರಿಂದ ನೀನೇ ಹೇಳಬೇಕು.

ಮದನಿಕೆ—ಶರ್ವಿಳಕ, ನೀನು ನನ್ನ ಮಾತನ್ನು ಕೇಳುವೆಯಾದರೆ ಈ ಒಡವೆಗಳನ್ನು ಪುನಃ ಚಾರುದತ್ತನಿಗೆ ಕೊಟ್ಟುಬಿಡು.

ಶರ್ವಿಳಕ—ನಾನು ಹಾಗೆ ಮಾಡಿದುದಾದರೆ ಚಾರುದತ್ತನು ನ್ಯಾಯ ಸ್ಥಾನಕ್ಕೆ ತಿಳಿಸುವನು.

ಮದನಿಕೆ—ಎಂದಿಗಾದರೂ ಚಂದ್ರನಿಂದ ಬಿಸಿಲು ಹುಟ್ಟುವುದುಂಟೆ?

ವಸಂತಸೇನೆ—ಭಾಪು! ಮದನಿಕೆ, ಭಾಪು! ಒಳ್ಳೆಯ ಮಾತನ್ನು ಹೇಳಿದೆ.

ಶರ್ವಿಳಕ—ಮದನಿಕೆ, ನಾನು ದೊರೆಗೂ ಹೆದರತಕ್ಕವನಲ್ಲ. ಆದರೆ ಆ ಚಾರುದತ್ತನ ಮನೆಯಲ್ಲಿಯೇ ಕದ್ದುತಂದು, ಮತ್ತೆ ಆತನ ಕೈಗೇ ಕೊಡುವುದೆಂದರೆ ನನ್ನಿಂದಾಗದು. ಮತ್ತೊಂದುಪಾಯವನ್ನು ಯೋಚಿಸು.

ಮದನಿಕೆ—ಹಾಗಾದರೆ ನಾನು ಚಾರುದತ್ತನ ಕಡೆಯವನು. ಈ ಒಡವೆಯನ್ನು ನಿನಗೆ ಕೊಟ್ಟುಬಾರೆಂದು ಆತನೇ ಕಳುಹಿಸಿರುವನು— ಎಂದು ಹೇಳಿ, ವಸಂತಸೇನೆಗೆ ಕೊಡು.

ಶರ್ವಿಳಕ—ಹಾಗೆ ಮಾಡುವುದರಿಂದ ಏನು ಫಲ?

ಮದನಿಕೆ—ಏನೇ? ನೀನು ಕಳ್ಳನೆಂಬ ಅಪವಾದ ತಪ್ಪುವುದು. ಚಾರುದತ್ತನೂ ಋಣಮುಕ್ತನಾಗುವನು. ಒಡವೆಯವರಿಗೇ ಒಡವೆ ಸೇರುವುದು.

ಶರ್ವಿಳಕ—ಮದನಿಕೆ, ಒಳ್ಳೆಯುಪಾಯವನ್ನು ಯೋಚಿಸಿದೆ. ನಿನ್ನಿಂದ ಈಗ ನಾನು ಬದುಕಿದೆನು.

ಮದನಿಕೆ—ಆದರೆ ನೀನು ಇಲ್ಲಿಯೇ ಕುಳಿತಿರು. ನಾನು ಹೋಗಿ ನೀನು ಬಂದಿರುವ ಸಂಗತಿಯನ್ನು ವಸಂತಸೇನೆಗೆ ತಿಳಿಸಿಬರುವೆನು.

ಶರ್ವಿಳಕ—ಹಾಗೆಯೇ ಆಗಲಿ.

ಮದನಿಕೆ—(ವಸಂತಸೇನೆಯ ಬಳಿಗೆ ಹೋಗಿ) ಆರ್ಯೆ, ಚಾರುದತ್ತನು ಒಬ್ಬ ಬ್ರಾಹ್ಮಣನನ್ನು ಕಳುಹಿಸಿರುವನು.

ವಸಂತಸೇನೆ—ಆತನೇ ಕಳುಹಿಸಿರುವನೆಂದು ನೀನು ಹೇಗೆ ಬಲ್ಲೆ?

ಮದನಿಕೆ—ಆರ್ಯೆ, ನಮ್ಮ ಮನೆಯವರನ್ನು ನಾನು ಕಾಣೆನೆ?

ವಸಂತಸೇನೆ—(ತಲೆಯನ್ನು ಅಲ್ಲಾಡಿಸುತ್ತಾ ನಕ್ಕು) ಯುಕ್ತ, ಕರೆದುಕೊಂಡು ಬಾ. (ಉಪ್ಪರಿಗೆಯಿಂದ ಇಳಿಯುವಳು.)

ಮದನಿಕೆ—ಅಪ್ಪಣೆಯ ಪ್ರಕಾರ (ಎಂದು ಹೋಗಿ ಕರೆದುಕೊಂಡು ಬರುವಳು.)

ಶರ್ವಿಳಕ—ಆರ್ಯೆ, ನಿನಗೆ ಮಂಗಳವಾಗಲಿ.

ವಸಂತಸೇನೆ—ಆರ್ಯನೆ, ನಮಸ್ಕರಿಸುವೆನು, ಬಾ, ಕುಳಿತುಕೊ.

ಶರ್ವಿಳಕ—ಮನೆಯು ಬಹಳ ಶಿಥಿಲವಾಗಿರುವುದರಿಂದ, ಈ ಒಡವೆಗಳನ್ನು ಭದ್ರಪಡಿಸುವುದಕ್ಕಾಗುವುದಿಲ್ಲ. ನಿನ್ನ ಒಡವೆಗಳನ್ನು ನೀನೇ ತೆಗೆದುಕೊ—ಎಂದು ಆರ್ಯಚಾರುದತ್ತನು ವಿಜ್ಞಾಪಿಸಿರುವನು. ಆದುದರಿಂದ ಈ ಒಡವೆಯನ್ನು ತೆಗೆದುಕೊ. (ಒಡವೆಗಳನ್ನು ಮದನಿಕೆಗೆ ಕೊಟ್ಟು) ಇನ್ನು ಹೋಗುವೆನು. (ಎಂದು ಹೊರಡುವನು.)

ವಸಂತಸೇನೆ—ಆರ್ಯನೆ, ನಿಲ್ಲುನಿಲ್ಲು. ಆರ್ಯಚಾರುದತ್ತನಿಗೆ ಹೇಳಬೇಕಾದುದು ಒಂದು ಮಾತಿದೆ.

ಶರ್ವಿಳಕ—(ಸ್ವಗತ) ಮತ್ತೆ ಇದೇನು ಗ್ರಹಚಾರ. (ಪ್ರಕಾಶ) ಅದೇನು ?

ವಸಂತಸೇನೆ—ಮದನಿಕೆಯನ್ನು ಪರಿಗ್ರಹಿಸು.

ಶರ್ವಿಳಕ—ಹಾಗೆಂದರೇನೋ ನನಗೆ ತಿಳಿಯಲಿಲ್ಲ.

ವಸಂತಸೇನೆ—ನಾನು ಬಲ್ಲೆನು.

ಶರ್ವಿಳಕ—ಅದು ಹೇಗೆ ?

ವಸಂತಸೇನೆ—ಈ ಒಡವೆಯನ್ನು ತಂದುಕೊಟ್ಟವನಿಗೆ ಮದನಿಕೆಯನ್ನು ಕೊಡಬೇಕೆಂದು ಚಾರುದತ್ತನು ಅಜ್ಞಾಪಿಸಿದ್ದನು. ಈಗ ಆತನೇ ಕೊಟ್ಟನೆಂದು ತಿಳಿದು ಈಕೆಯನ್ನು ಪರಿಗ್ರಹಿಸು.

ಶರ್ವಿಳಕ—(ಸ್ವಗತ) ನನ್ನ ಅಭಿಪ್ರಾಯವನ್ನು ಈಕೆ ಹೇಗೆ ತಿಳಿದುಕೊಂಡಳು ? (ಪ್ರಕಾಶ) ಭಾಪು ! ಆರ್ಯಚಾರುದತ್ತನೆ, ಭಾಪು !

ವಸಂತಸೇನೆ—ಮದನಿಕೆ, ಈ ಬ್ರಾಹ್ಮಣನಿಗೆ ನಿನ್ನನ್ನು ಕೊಟ್ಟಿರುವೆನು. ಈತನೊಡನೆ ಹೋಗು. ನನ್ನನ್ನು ಸ್ಮರಿಸಿಕೊಳ್ಳುತ್ತಿರುವೆಯೊ ?

ಮದನಿಕೆ—ಆರ್ಯೆ, ನಾನು ಹೋಗಿಬರಲೆ ? (ನಮಸ್ಕರಿಸುವಳು.)

ವಸಂತಸೇನೆ—ಮದನಿಕೆ, ಏಳು ಏಳು, ನೀನು ಬ್ರಾಹ್ಮಣನಿಗೆ ಪತ್ನಿಯಾದುದರಿಂದ ಈಗ ನಾನೇ ನಿನಗೆ ನಮಸ್ಕರಿಸಬೇಕಾಗಿದೆ.

ಆತನೊಡನೆ ಜಾಗ್ರತೆಯಾಗಿ ರಥವನ್ನು ಹತ್ತು. ನನ್ನನ್ನು ಮಾತ್ರ ನೀನು ಪದೇಪದೇ ಸ್ಮರಿಸುತ್ತಿರು. (ವಸಂತಸೇನೆ ಉಪ್ಪರಿಗೆಯ ಮೇಲಕ್ಕೆ ಹೋಗುವಳು).

ಶರ್ವಿಳಕ—ವಸಂತಸೇನೆಯೆ, ನಿನಗೆ ಮಂಗಳವಾಗಲಿ. (ಮದನಿಕೆಯೊಡನೆ ರಥದಲ್ಲಿ ಕುಳಿತು ಹೊರಡಲು ಯತ್ನಿಸುವನು.)

ತೆರೆಯಲ್ಲಿ—ಎಲ್ಲರೂ ಕೇಳಿ, ಈ ದೇಶದಲ್ಲಿ ಆರ್ಯಕನೆಂಬ ಗೊಲ್ಲರ ಹುಡುಗನಿಗೆ ದೊರೆತನವಾಗುವುದೆಂದು ಸಿದ್ಧನು ಹೇಳಿದ್ದಮಾತಿಗೆ ಭಯಪಟ್ಟು, ದೊರೆಯಾದ ಪಾಲಕಮಹಾರಾಜನು ಹಳ್ಳಿಯಿಂದ ಆರ್ಯಕನನ್ನು ಹಿಡಿದುತರಿಸಿ, ಸೆರೆಯಲ್ಲಿಡಿಸಿರುವನು. ಆದುದರಿಂದ ನಿಮ್ಮ ನಿಮ್ಮ ಕಾರ್ಯಗಳಲ್ಲಿ ನೀವು ಬಹಳ ಜಾಗರೂಕತೆಯಿಂದ ಇರಬೇಕೆಂದು ಶಕಾರನು ಆಜ್ಞಾಪಿಸಿರುವನು.

ಶರ್ವಿಳಕ—(ಕೇಳಿ) ಏನು! ನನಗೆ ಪರಮಮಿತ್ರನಾದ ಆರ್ಯಕನನ್ನು ಪಾಲಕಮಹಾರಾಜನು ಸೆರೆಯಲ್ಲಿಡಿಸಿರುವನೆ ? ಅಯ್ಯೋ! ಕಷ್ಟಕಷ್ಟ. ಈಗಲೇ ಹೋಗಿ ಆರ್ಯಕನನ್ನು ಬಿಡಿಸೋಣವೆಂದರೆ ಈ ಸಂಸಾರ ಬೇರೆ ಒಂದು ಗಂಟು ಬಿದ್ದಿತು ; ಅಥವಾ ಲೋಕದಲ್ಲಿ ಪುರುಷನಿಗೆ ಸ್ತ್ರೀಯೂ, ಮಿತ್ರನೂ, ಇವೆರಡು ವಸ್ತುಗಳೇ ಪ್ರೇಮಪಾತ್ರಗಳು. ಪ್ರಕೃತದಲ್ಲಿ ಈ ಆರ್ಯಕನನ್ನು ಕಂಡರೆ ನನಗೆ ನನ್ನ ಸ್ತ್ರೀಯಲ್ಲಿರುವುದಕ್ಕಿಂತಲೂ ಹೆಚ್ಚಾದ ವಿಶ್ವಾಸವಿರುವುದು. ಆದುದರಿಂದ ಹೋಗಿ ಬಿಡಿಸುವೆನು. (ರಥದಿಂದಿಳಿಯುವನು.)

ಮದನಿಕೆ—(ಕಣ್ಣೀರುಹಾಕುತ್ತ ಕೈಮುಗಿದು) ಆರ್ಯನೆ, ನನ್ನನ್ನು ಗುರುಜನಗಳ ಸಮೀಪಕ್ಕೆ ಕಳುಹಿಸು.

ಶರ್ವಿಳಕ—ಭಾಪು! ಪ್ರಿಯೆ, ಭಾಪು! ನನ್ನ ಮನಸ್ಸಿನಲ್ಲಿದ್ದಂತೆಯೇ ನೀನೂ ಹೇಳಿದೆ. ನಿನ್ನನ್ನು ನನ್ನ ಪ್ರಿಯಮಿತ್ರನಾದ ರೇಭಿಲನ ಮನೆಯಲ್ಲಿ ಬಿಟ್ಟು ಹೋಗುವೆನು.

ಮದನಿಕೆ—ಹಾಗೆಯೇ ಆಗಲಿ. ನೀನುಮಾತ್ರ ಬಹಳ ಜಾಗರೂಕನಾಗಿರು.

ಶರ್ವಿಳಕ—ಈಗ ನಾನು ಪಾಲಕನ ಜ್ಞಾತಿಗಳನ್ನೂ ವಿಟರನ್ನೂ

ಇನ್ನೂ ತುಂಟರಾಗಿರತಕ್ಕವರನ್ನೆಲ್ಲಾ ಎತ್ತಿಕಟ್ಟಿ, ಪಾಲಕನನ್ನು ಅವರು ಹೆಚ್ಚಾಗಿ ದ್ವೇಷಿಸುವಂತೆಮಾಡಿ, ಮಿತ್ರನಾದ ಆರ್ಯಕನನ್ನು ಬಿಡಿಸುವೆನು. (ಎಂದು ಹೋಗುವನು).

ಚೇಟಿ—(ಬಂದು) ಆರ್ಯೆ, ನಿನಗೆ ಮಂಗಳವಾಗಲಿ. ಆರ್ಯ ಚಾರುದತ್ತನ ಸಮೀಪದಿಂದ ಮೈತ್ರೇಯನು ಬಂದಿರುವನು.

ವಸಂತಸೇನೆ—ಎಲೌ, ಇದು ಸುದಿವಸ; ಮೈತ್ರೇಯನನ್ನು ಜಾಗ್ರತೆಯಾಗಿ ಒಳಕ್ಕೆ ಕರೆದುಕೊಂಡು ಬಾ.

ಚೇಟಿ—ಅಪ್ಪಣೆಯ ಪ್ರಕಾರ. (ಹೋಗಿ ಕರೆತರುವಳು).

ವಿದೂಷಕ—(ಬಂದು) ಪೂಜ್ಯಳೆ, ನಿನಗೆ ಶುಭವಾಗಲಿ.

ವಸಂತಸೇನೆ—ಓಹೋ! ಮೈತ್ರೇಯನು ಬಂದನು! (ಜಾಗ್ರತೆ ಯಾಗಿ ಎದ್ದು) ಮೈತ್ರೇಯನೆ, ನಿನಗೆ ಕ್ಷೇಮವೆ? ಈ ಪೀಠದಮೇಲೆ ಕುಳಿತುಕೊ.

ವಿದೂಷಕ—ಒಳ್ಳೆಯದು. (ಇಬ್ಬರೂ ಕುಳಿತುಕೊಳ್ಳುವರು).

ವಸಂತಸೇನೆ—ಮೈತ್ರೇಯನೆ, ಚಾರುದತ್ತನಿಗೆ ಕುಶಲವೆ?

ವಿದೂಷಕ—ಕುಶಲವಾಗಿರುವನು.

ವಸಂತಸೇನೆ—ಅಯ್ಯಾ, ನೀನು ಬಂದುದೇಕೆ?

ವಿದೂಷಕ—ನೀನು ನಮ್ಮಲ್ಲಿ ಕೊಟ್ಟಿದ್ದ ಒಡವೆಯನ್ನು ಜೂಜಾಡಿ ಸೋತುಬಿಟ್ಟೆವು. ಅದನ್ನು ತೆಗೆದುಕೊಂಡ ಜೂಜುಗಾರನು ಎಲ್ಲೋ ಹೋದನು. ಎಷ್ಟು ಹುಡುಕಿದರೂ ಗೊತ್ತಾಗಲಿಲ್ಲ.

ಚೇಟಿ—ಆರ್ಯೆ, ನಿನ್ನ ಪುಣ್ಯವೇ ಪುಣ್ಯ. ಆರ್ಯಚಾರುದತ್ತನು ಜೂಜುಗಾರನಾದನಂತೆ.

ವಸಂತಸೇನೆ—(ಸ್ವಗತ) ಇವನಲ್ಲವೆ ಮಹಾನುಭಾವನು, ನಂಬಿ ಕೆಗೆ ತಕ್ಕವನು. ಆದುದರಿಂದಲೇ ಆತನಲ್ಲಿ ನನಗೆ ಅಷ್ಟು ಪ್ರೇಮ. (ಪ್ರಕಾಶ) ಆಮೇಲೆ?

ವಿದೂಷಕ—ಆದುದರಿಂದ ಅದಕ್ಕೆ ಪ್ರತಿಯಾಗಿ ಈ ರತ್ನಾಹಾರ ವನ್ನು ತೆಗೆದುಕೊ—ಎಂದು ಆರ್ಯಚಾರುದತ್ತನು ವಿಜ್ಞಾಪಿಸಿರುವನು.

ವಸಂತಸೇನೆ—ಈತನು ಹೀಗೆ ಹೇಳುವನಲ್ಲಾ! ಒಳ್ಳೆಯದು.

ಈಗಲೇ ಈ ಆಭರಣಗಳನ್ನು ತೋರಿಸಲೇ ? ಅಥವಾ ಬೇಡ, ಏಕೆ ತೋರಿಸ ಬೇಕು ?

ವಿದೂಷಕ—ಏನು ! ಈ ರತ್ನಾಹಾರವನ್ನು ನೀನು ತೆಗೆದುಕೊಳ್ಳುವು ದಿಲ್ಲವೋ ?

ವಸಂತಸೇನೆ—(ನಕ್ಕು, ಸಖಿಯ ಮುಖವನ್ನು ನೋಡುತ್ತ) ಮೈತ್ರೇಯನೆ, ತೆಗೆದುಕೊಳ್ಳದೆ ಏನು ? (ತೆಗೆದುಕೊಂಡು) ಪ್ರದೋಷ ಕಾಲಕ್ಕೆ ಸರಿಯಾಗಿ ನಾನು ಬರುವೆನೆಂದು ನನ್ನ ವಿಜ್ಞಾಪನೆಯನ್ನು ದ್ಯೂತಕರನಾದ ಆ ಚಾರುದತ್ತನಿಗೆ ತಿಳಿಸು.

ವಿದೂಷಕ—(ಸ್ವಗತ) ಇವಳಿಗೆ ಈ ರತ್ನಾಹಾರ ಸಾಲದೇನೋ ? ಇನ್ನೂ ಅಲ್ಲಿಬಂದು ಪುನಃ ಏನನ್ನೋ ಸಂಗ್ರಹಿಸಿಕೊಂಡು ಬರಬೇಕೆಂದಿರು ವಂತಿದೆ. ಇವರ ಕೈಗೆ ಸಿಕ್ಕಿದಮೇಲೆ ಸರಿ. ತಲೆಯೆತ್ತುವುದಿಲ್ಲ. (ಪ್ರಕಾಶ) ಆರ್ಯೆ, ಹಾಗೆಯೇ ಆಗಲಿ, ಹೇಳುವೆನು. (ಎಂದು ಹೋಗುವನು.)

ವಸಂತಸೇನೆ—ಎಲೌ, ರತ್ನಾಹಾರವನ್ನು ತೆಗೆದುಕೊ. ಆರ್ಯ ಚಾರುದತ್ತನನ್ನು ನೋಡುವುದಕ್ಕೆ ಹೋಗೋಣ.

ಚೇಟಿ—ಆರ್ಯೆ, ನೋಡುನೋಡು ! ಅಕಾಲದಲ್ಲಿ ಮೇಘೋ ದಯವಾಗಿರುವುದು !

ವಸಂತಸೇನೆ—

ಕಂದ॥ ಉದಯಿಕೆ ಮೇಘಾವಳಿ ನಿಶೆ ।
ಯೊದವುಗೆ ಮೇಣ್ ಕರೆಗೆ ಬಿರುಮಳೆಯಾಗಳ್ ॥
ಅದನೆನಸುಂ ಪರಿಗಣಿಸದು ।
ಹೃದಯಂ ದಯಿತಾಭಿಮುಖತೆಯಾಂತಿರ್ಪುದರಿಂ ॥

ಆದುದರಿಂದ ರತ್ನಾಹಾರವನ್ನು ತೆಗೆದುಕೊಂಡು ಜಾಗ್ರತೆಯಾಗಿ ಬಾ.

(ಎಂದು ಇಬ್ಬರೂ ಹೋಗುವರು.)

ಇದು

ಮದನಿಕಾಶರ್ವಿಳಕವೆಂಬ ನಾಲ್ಕನೆಯಂಕಂ

———

# ಐದನೆಯಂಕಂ

ವಿದೂಷಕ—(ಬಂದು) ಏನಾಶ್ಚರ್ಯ ! ಸೂಳೆಯರಿಗೆ ಎಷ್ಟು ಜಿಪುಣ ತನ ! ದಾಕ್ಷಿಣ್ಯವೆನ್ನುವುದು ಇಲ್ಲವೇ ಇಲ್ಲ. ವಿಶ್ವಾಸದಿಂದ ನನ್ನ ಸಂಗಡ ಒಂದು ಮಾತನ್ನೂ ಆಡದೆ ಮುತ್ತಿನಹಾರವನ್ನು ಮಾತ್ರ ತೆಗೆದುಕೊಂಡಳು. ಇನ್ನೇನೂ ಹೆಚ್ಚಾಗಿ ಬೇಡ. ಮೈತ್ರೇಯನೆ, ಬಂದೆಯಾ ? ಕುಳಿತುಕೊ ಎಂದು ಕೂಡಾ ಹೇಳಲಿಲ್ಲವಲ್ಲಾ ! ಇರಲಿ, ಇನ್ನುಮೇಲೆ ನಾನು ನನ್ನ ಪ್ರಾಣವಿರುವವರೆಗೂ ಅವಳ ಮುಖವನ್ನೇ ನೋಡುವುದಿಲ್ಲ. ವಂಚನೆ ಮಾಡದೆ ಇರುವ ವರ್ತಕನೂ, ಕಳದೆ ಇರುವ ಅಕ್ಕಸಾಲಿಗನೂ, ದಾತೃತ್ವವುಳ್ಳ ಸೂಳೆಯೂ—ದುರ್ಲಭವೆಂಬ ಲೋಕೋಕ್ತಿಯು ನಿಶ್ಚ ಯವೇ ಸರಿ. ಆದುದರಿಂದ ಈಗ ಹೋಗಿ, ಆ ಚಾರುದತ್ತನಿಗೆ ಚೆನ್ನಾಗಿ ಬೋಧಿಸಿ, ಇನ್ನುಮೇಲೆ ಅವನು ಸೂಳೆಯರ ಸುದ್ದಿಗೇ ಹೋಗದಂತೆ ಮಾಡುವೆನು. (ಮುಂದೆ ನೋಡಿ) ಇದೊ, ನನ್ನ ಮಿತ್ರನು ನನ್ನನ್ನೇ ನೋಡುತ್ತಾ ಇತ್ತಲಾಗಿಯೇ ಬರುತ್ತಿರುವನು. (ಸಮೀಪಕ್ಕೆ ಹೋಗಿ) ಮಿತ್ರನೆ, ನಿನಗೆ ಮಂಗಳವಾಗಲಿ.

ಚಾರುದತ್ತ—ಮಿತ್ರನೆ, ಸುಖವಾಗಿ ಬಂದೆಯಾ ? ಬಾ, ನೀನು ಹೋಗಿದ್ದ ಕೆಲಸವೇನಾಯಿತು ?

ವಿದೂಷಕ—ಆಗುವುದೇನು ? ಹಾಳಾಗಿಯೇ ಹೋಯಿತು !

ಚಾರುದತ್ತ—ಏನು ! ರತ್ನಾಹಾರವನ್ನು ತೆಗೆದುಕೊಳ್ಳಲಿಲ್ಲವೋ ?

ವಿದೂಷಕ—ಅಯ್ಯೋ! ಅಯ್ಯೋ ! ನಾವು ಅಷ್ಟು ಪುಣ್ಯವಂತರೇ ? ಕೈಮುಗಿದು–ದಮ್ಮಯ್ಯ ! ದಮ್ಮಯ್ಯ ! ಎಂದು ತೆಗೆದುಕೊಂಡಳು.

ಚಾರುದತ್ತ—ಮತ್ತೇಕೆ ಹಾಳಾಗಿಹೋಯಿತೆಂದು ಹೇಳಿದೆ ?

ವಿದೂಷಕ—ಹೇಗೆ ಹಾಳಾಗಲಿಲ್ಲ. ನೀನೇ ಹೇಳು. ನಾವು ತಿಂದುದಲ್ಲ. ಉಂಡುದಲ್ಲ. ಕಳ್ಳನು ಕದ್ದುಕೊಂಡುಹೋದುದು. ಅದೂ

ಸ್ವಲ್ಪ ಕ್ರಯಬಾಳತಕ್ಕುದು. ಅಂತಹ ಒಡವೆಗೆ ಲೋಕೋತ್ತರವಾದ ರತ್ನಾಹಾರವನ್ನು ಕೊಟ್ಟಮೇಲೆ ಹಾಳಾಗಿತಾನೆ ಹೋಯಿತು.

ಚಾರುದತ್ತ—ಮಿತ್ರನೇ, ಹಾಗಲ್ಲ. ಅವಳು ಯಾವ ನಂಬಿಕೆ ಯಿಂದ ನಮ್ಮಲ್ಲಿ ಆ ಪದಾರ್ಥವನ್ನು ಇಟ್ಟಿದ್ದಳೋ ಆ ನಂಬಿಕೆಯನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಕೊಟ್ಟುದು.

ವಿದೂಷಕ—ನನಗೆ ದುಃಖಪಡುವುದಕ್ಕೆ ಇದೊಂದೇ ಅಲ್ಲ. ಇನ್ನೂ ಒಂದು ಕಾರಣವಿರುವುದು.

ಚಾರುದತ್ತ—ಅದೇನು ?

ವಿದೂಷಕ—ಅದೇನೋ ತನ್ನ ಸಖಿಯೊಡನೆ ಸನ್ನೆಮಾಡುತ್ತಾ ಸೆರಗಿನಿಂದ ಬಾಯನ್ನು ಮುಚ್ಚಿಕೊಂಡು ನನ್ನನ್ನು ಹಾಸ್ಯಮಾಡಿದಳು. ನಾನು ಬ್ರಾಹ್ಮಣ. ಆದರೂ ಚಿಂತೆಯಿಲ್ಲ, ನಿನ್ನ ಕಾಲನ್ನಾದರೂ ಕಟ್ಟಿಕೊಳ್ಳುವೆನು. ಈ ಹಾಳುಸೂಳೆಯರ ಸಂಗವನ್ನು ಮಾತ್ರ ಬಿಟ್ಟು ಬಿಡು. ಸೂಳೆಯರು ಪಾದರಕ್ಷೆಯಲ್ಲಿ ಸಿಕ್ಕಿಕೊಂಡಿರುವ ಮಣ್ಣಿನ ಹೆಂಟೆ ಯಂತೆ ಮನುಷ್ಯನ ಪ್ರಾಣವನ್ನೇ ತೆಗೆಯುವರು; ಅಲ್ಲದೆ ಸೂಳೆ, ಶಾನುಭಾಗ, ಆನೆ, ಭಿಕ್ಷು, ಕತ್ತೆ ಇವುಗಳಿದ್ದಕಡೆ ದುಷ್ಟರೂ ಕೂಡ ಸುಳಿ ಯುವುದಿಲ್ಲವೆಂಬುದನ್ನು ಕೇಳಿದ್ದೀಯೋ ಇಲ್ಲವೋ ?

ಚಾರುದತ್ತ—ಮಿತ್ರನೆ, ಸೂಳೆಯರ ಸಹವಾಸವನ್ನು ಬಿಡು–ಎಂದು ನೀನೇನೂ ಹೇಳಕೆಲಸವಿಲ್ಲ. ನನ್ನ ಅವಸ್ಥೆಯೇ ಅದನ್ನು ಬಿಡುವಂತೆ ಮಾಡಿದೆ.

ವಿದೂಷಕ—ಅಯ್ಯಾ, ಈ ಸಾಯಂಕಾಲಕ್ಕೆ ಬರುವೆನೆಂದು ಆ ವಸಂತಸೇನೆ ಹೇಳಿರುವಳು. ಈಗ ನೀನು ಕೊಟ್ಟುಕಳುಹಿಸಿರುವ ರತ್ನಾ ವಳಿ ಸಾಲದೆ ಇನ್ನೂ ಏನನ್ನೋ ಸಂಗ್ರಹಿಸಿಕೊಂಡು ಹೋಗುವುದಕ್ಕಾಗಿ ಬರುವಂತೆ ತೋರುತ್ತದೆ.

ಚಾರುದತ್ತ—ಬರಲಿ, ಸಂತೋಷವಾಗಿ ಬಂದು ಹೋಗಲಿ.

ಕುಂಭೀಲಕ—(ಬಂದು) ವಸಂತಸೇನೆಯು ತಾನು ಬಂದಿರುವ ವೃತ್ತಾಂತವನ್ನು ಆರ್ಯ ಚಾರುದತ್ತನಿಗೆ ತಿಳಿಸೆಂದು ನನಗಾಜ್ಞಾಪಿಸಿ ದಳು. ಇದೊ, ಚಾರುದತ್ತನು ದುಷ್ಟನಾದ ಈ ಬಾಲಕನೊಡನೆ ಇಲ್ಲೇ

ಇರುವನು. ಒಳ್ಳೆಯದು, ಈ ದುಷ್ಟನನ್ನು ಎಚ್ಚರಗೊಳಿಸುವೆನು. (ವಿದೂಷಕನ ಮೇಲೆ ಮಣ್ಣುಹೆಂಟೆಯನ್ನು ಬೀಸುವನು.)

ವಿದೂಷಕ—ಬೇಲಿಯೊಳಗಿರುವ ಬೇಲದಮರಕ್ಕೆ ಬೀರುವಂತೆ ನನ್ನಮೇಲೆ ಯಾವನೋ, ಕಲ್ಲುಗಳನ್ನು ಬೀರುವನು.

ಚಾರುದತ್ತ—(ನೋಡಿ) ಅಯ್ಯಾ, ಲೋವೆಯಲ್ಲಿರುವ ಮಣ್ಣುಹೆಂಟೆಗಳನ್ನು ಪಾರಿವಾಳದ ಹಕ್ಕಿಗಳು ಕೆಡಹಿರಬಹುದು.

ವಿದೂಷಕ—ಎಲೆ ಪಾರಿವಾಳದ ಹಕ್ಕಿಯೇ. ಈಗ ನೋಡು. ಈ ದಂಡಕಾಷ್ಠದಿಂದ ಪಕ್ವವಾದ ಮಾವಿನಹಣ್ಣನ್ನು ಕೆಡಹುವಂತೆ ನಿನ್ನನ್ನು ಕೆಳಕ್ಕೆ ಬೀಳಿಸುವೆನು. (ಎಂದು ದಂಡಕಾಷ್ಠವನ್ನು ತೆಗೆದುಕೊಂಡು ಓಡುವನು.)

ಚಾರುದತ್ತ—(ಯಜ್ಞೋಪವೀತವನ್ನು ಹಿಡಿದುಕೊಂಡು) ಮಿತ್ರನೆ, ಬೇಡಬೇಡ. ಅಯ್ಯೋ ಪಾಪ! ಅದೇನು ಮಾಡೀತು.

ಕುಂಭೀಲಕ—ಪಾರಿವಾಳದ ಹಕ್ಕಿಯನ್ನು ನೋಡುವನೇ ಹೊರತು ನನ್ನನ್ನು ನೋಡುವುದೇ ಇಲ್ಲ; ಇರಲಿ. ಮತ್ತೊಂದು ಮಣ್ಣುಹೆಂಟೆಯನ್ನು ಹಾಕುವೆನು. (ಎಂದು ಪುನಃ ಮತ್ತೊಂದು ಹೆಂಟೆಯನ್ನು ಬೀಸುವನು).

ವಿದೂಷಕ—(ಸುತ್ತಲೂ ನೋಡಿ) ಏನು ಕುಂಭೀಲಕನೋ? (ಕದವನ್ನು ತೆರೆದು) ಎಲೋ, ಕುಂಭೀಲಕ, ಬಾ. ಕುಳಿತುಕೊ.

ಕುಂಭೀಲಕ—ಆರ್ಯನೆ, ವಂದಿಸುವೆನು.

ವಿದೂಷಕ—ಎಲೋ, ಮೋಡ ಮುಚ್ಚಿಕೊಂಡಿದೆ. ಈ ಕತ್ತಲೆಯಲ್ಲಿ ಎಲ್ಲಿಂದ ಬಂದೆ?

ಕುಂಭೀಲಕ—ಅವಳು.

ವಿದೂಷಕ—ಯಾರವಳು?

ಕುಂಭೀಲಕ—ಅವಳು.

ವಿದೂಷಕ—ನೀನು ಸುಮ್ಮನೆ ಅವಳು ಅವಳು–ಎನ್ನುವೆ. ಸರಿಯಾಗಿ ಹೇಳು.

ಕುಂಭೀಲಕ—(ಸ್ವಗತ) ಇರಲಿ, ಹೀಗೆ ಹೇಳುವೆನು. (ಪ್ರಕಾಶ) ಎಲೈ, ನಾನು ನಿನಗೆ ಒಂದು ಪ್ರಶ್ನೆಯನ್ನು ಕೊಡುವೆನು.

ವಿದೂಷಕ—ನಾನು ನಿನ್ನ ತಲೆಯಮೇಲೆ ನನ್ನ ಕಾಲನ್ನಿಡುವೆನು.

ಕುಂಭೀಲಕ—ಇರಲಿ, ಮಾವಿನಮರಗಳು ಚಿಗುರುವ ಕಾಲವಾವುದು ?

ವಿದೂಷಕ—ಎಲೋ, ನನಗೆ ತಿಳಿಯದೋ ? ಗ್ರೀಷ್ಮ.

ಕುಂಭೀಲಕ—(ನಗುತ್ತ) ಆಃ ! ಎಷ್ಟು ಚೆನ್ನಾಗಿ ಹೇಳಿದೆ !

ವಿದೂಷಕ—(ಸ್ವಗತ) ಅದಲ್ಲವಂತೆ. ನಾನು ಇನ್ನೇನು ಹೇಳಲಿ ! (ಯೋಚಿಸಿ, ಪ್ರಕಾಶ) ಎಲೋ, ಸ್ವಲ್ಪ ತಾಳು. (ಚಾರುದತ್ತನ ಸಮೀಪಕ್ಕೆ ಬಂದು) ಅಯ್ಯಾ, ಮಾವಿನ ಮರಗಳು ಚಿಗುರುವ ಕಾಲವಾವುದು ?

ಚಾರುದತ್ತ—ಮೂರ್ಖನೆ, ವಸಂತ.

ವಿದೂಷಕ—(ಕುಂಭೀಲಕನನ್ನು ಕುರಿತು) "ಮೂರ್ಖನೆ, ವಸಂತ."

ಕುಂಭೀಲಕ—ಇದನ್ನು ಹೇಳಿದೆಯೋ ! ಇನ್ನೊಂದು ಪ್ರಶ್ನೆಯನ್ನು ಕೊಡುವೆನು. ದೊಡ್ಡ ಪಟ್ಟಣಗಳನ್ನು ಸಂರಕ್ಷಣೆಮಾಡುವುದು ಯಾವುದು ?

ವಿದೂಷಕ—ಎಲೋ, ದಾರಿ.

ಕುಂಭೀಲಕ—(ನಗುತ್ತ) ಅಯ್ಯೋ, ಮಂಕೆ, ಅದಲ್ಲ.

ವಿದೂಷಕ—(ಸ್ವಗತ) ಒಳ್ಳೆಯ ಸಂಶಯ ಬಂತಲ್ಲ. ಒಳ್ಳೆಯದು, ಪುನಃ ಚಾರುದತ್ತನನ್ನೇ ಕೇಳಿಕೊಂಡು ಬರುವೆನು. (ಚಾರುದತ್ತನ ಬಳಿಗೆ ಬಂದು) ಮಿತ್ರನೆ, ದೊಡ್ಡದೊಡ್ಡ ಪಟ್ಟಣಗಳನ್ನು ಸಂರಕ್ಷಣೆ ಮಾಡುವುದಾವುದು ?

ಚಾರುದತ್ತ—ಅಯ್ಯಾ, ಸೇನೆ.

ವಿದೂಷಕ—(ಕುಂಭೀಲಕನನ್ನು ಕುರಿತು) "ಅಯ್ಯಾ, ಸೇನೆ."

ಕುಂಭೀಲಕ—ಎರಡನ್ನೂ ಸೇರಿಸಿ ಜಾಗ್ರತೆಯಾಗಿ ಹೇಳು.

ವಿದೂಷಕ—ಸೇನೆವಸಂತ.

ಕುಂಭೀಲಕ—ಅಲ್ಲ ತಲೆಕೆಳಕಾಗಿ ಹೇಳು.

ವಿದೂಷಕ—(ತಲೆಯನ್ನು ಕೆಳಕ್ಕೆ ಊರಿಕೊಂಡು) ಸೇನೆವಸಂತ.

ಕುಂಭೀಲಕ—ಅಯ್ಯೋ, ನಾನು ಇಂತಹ ಬೆಪ್ಪನನ್ನು ಎಲ್ಲೂ ಕಾಣಲಿಲ್ಲ. ಪದಗಳನ್ನು ತಿರುಗಿಸಿ ಹೇಳು.

ವಿದೂಷಕ—(ಕಾಲುಗಳನ್ನು ತಿರುಗಿಸಿಕೊಂಡು) ಸೇನೆವಸಂತ.

ಕುಂಭೀಲಕ—ಪದಗಳೆಂದರೆ ನಿನ್ನ ಕಾಲುಗಳನ್ನಲ್ಲ. ಶಬ್ದಗಳನ್ನು ತಿರುಗಿಸಿ ಹೇಳು—ಎಂದೆನು.

ವಿದೂಷಕ—ಹಾಗೋ? ಇದಕ್ಕೇತಕ್ಕೆ ಇಷ್ಟು ಪೇಚಾಡಿಸಿದೆ. ವಸಂತಸೇನೆ.

ಕುಂಭೀಲಕ—ಅದೆ. ಅವಳ ಸಮಿಾಪದಿಂದಲೇ ನಾನು ಬಂದುದು.

ವಿದೂಷಕ—ಆದರೆ ಹೋಗಿ ಚಾರುದತ್ತನಿಗೆ ತಿಳಿಸುವೆನು. (ಚಾರುದತ್ತನ ಸಮಿಾಪಕ್ಕೆ ಬಂದು) ಅಯ್ಯಾ, ಚಾರುದತ್ತನೆ, ನಿನ್ನ ಸಾಹುಕಾರನು ಬಂದನು.

ಚಾರುದತ್ತ—ನನ್ನ ಸಾಹುಕಾರನಾರು ?

ಕುಂಭೀಲಕ—ಪೂಜ್ಯನೆ, ಬಾಗಿಲಲ್ಲಿ ವಸಂತಸೇನೆ ಬಂದಿರುವಳು.

ವಿದೂಷಕ—ಸಾಹುಕಾರ ತಂದಿರುವ ರತ್ನವನ್ನು ನೋಡಿದೆಯೋ? ಸಾಹುಕಾರನೆಂದಮಾತ್ರಕ್ಕೇ ಕೋಪಿಸಿಕೊಂಡೆಯಲ್ಲಾ. ಈಗೇತಕ್ಕೆ ನಗುವೆ?

ಚಾರುದತ್ತ—ಇದು ನಿಜವೆ?

ವಿದೂಷಕ—ನನ್ನ ಮಾತಿನಲ್ಲಂತೂ ನಿನಗೆ ನಂಬಿಕೆಯಿಲ್ಲ. ಈತನ ಮಾತಿನಲ್ಲೂ ನಿನಗೆ ನಂಬಿಕೆಯಿಲ್ಲವೆ? ಇದೊ, ನೋಡು.

ವಸಂತಸೇನೆ—(ಬಂದು) ಅಯ್ಯಾ, ನಿಮ್ಮ ಜೂಜುಗಾರನೆಲ್ಲಿ?

ವಿದೂಷಕ—(ಸ್ವಗತ) ಜೂಜುಗಾರನೆಂದು ಚಾರುದತ್ತನನ್ನು ಹಾಸ್ಯಮಾಡುವಳು. (ಪ್ರಕಾಶ) ಆರ್ಯೆ, ಆತನು ಶುಷ್ಕೋದ್ಯಾನದಲ್ಲಿರುವನು.

ವಸಂತಸೇನೆ—ನಿಮ್ಮ ಶುಷ್ಕೋದ್ಯಾನವಾವುದು ?

ವಿದೂಷಕ—ತಿನ್ನುವುದಕ್ಕೂ, ಕುಡಿಯುವುದಕ್ಕೂ ಎಲ್ಲಿ ಇಲ್ಲವೋ ಅದೇ ಶುಷ್ಕೋದ್ಯಾನ.

ವಸಂತಸೇನೆ—(ನಗುವಳು).

ಚಾರುದತ್ತ—ಓಹೋ! ವಸಂತಸೇನೆ ಬಂದಳು. (ಎದ್ದು ಬಂದು) ಇದುವರೆಗೂ ಪ್ರದೋಷಕಾಲಗಳಲ್ಲಿ ನಿದ್ರೆಯಿಲ್ಲದೆ ನಿಟ್ಟುಸಿರು

ಬಿಡುತ್ತಾ ರಾತ್ರಿಗಳನ್ನು ಕಳೆಯುತ್ತಿದ್ದೆನು. ಈಗ ನಿನ್ನ ಸಾಮೀಪ್ಯದಿಂದ ಈ ಪ್ರದೋಷಕಾಲವು ಬಹಳ ಸುಖಕರವಾಗಿರುವುದು. ಸುಖವಾಗಿ ಬಂದೆಯಾ ? ಬಾ, ಕುಳಿತುಕೊ.

ವಿದೂಷಕ—ಆರ್ಯೆ, ಬೆಳದಿಂಗಳೂ ಇಲ್ಲ. ಇಷ್ಟು ಕತ್ತಲೆ! ಮಳೆ! ಇಂತಹುದರಲ್ಲಿ ನೀನು ಬಂದುದೇನು ?

ಚೇಟಿ—ಏನೋ ಬ್ರಾಹ್ಮಣ, ಏನೂ ತಿಳಿದವನಲ್ಲ.

ವಸಂತಸೇನೆ—ಹಾಗಲ್ಲ, ಬುದ್ಧಿವಂತನೆಂದು ಹೇಳು.

ಚೇಟಿ—ಆ ರತ್ನಾವಳಿಯ ಬೆಲೆಯನ್ನು ಕೇಳುವುದಕ್ಕೋಸ್ಕರ ಈಗ ಬಂದುದು.

ವಿದೂಷಕ—(ಮರೆಯಾಗಿ) ಅಯ್ಯಾ, ಆ ಒಡವೆಗೆ ರತ್ನಾವಳಿ ಸರಿಬಾಳದೆಂದು ಇನ್ನೇನನ್ನಾದರೂ ಸಂಗ್ರಹಿಸಿಕೊಂಡು ಹೋಗುವುದಕ್ಕೋಸ್ಕರ ವಸಂತಸೇನೆಯು ಬರುವಳೆಂದು ನಾನು ಮೊದಲೇ ಹೇಳಲಿಲ್ಲವೇ ?

ಚೇಟಿ—ಆರ್ಯನು ಕೊಟ್ಟ ರತ್ನಹಾರವನ್ನು ತನ್ನದೆಂದು ತಿಳಿದು ನಮ್ಮ ಒಡತಿಯು ಜೂಜಿನಲ್ಲಿ ಸೋತುಬಿಟ್ಟಳು. ತೆಗೆದುಕೊಂಡವನೆಲ್ಲೋ ಹೊರಟುಹೋದನು. ಎಷ್ಟು ಹುಡುಕಿದರೂ ಸಿಕ್ಕಲಿಲ್ಲ.

ವಿದೂಷಕ—ಆರ್ಯೆ, ಇದೇನು ! ನಾನು ಹೇಳಿದ ಮಾತನ್ನೇ ಹೇಳುವೆ ?

ಚೇಟಿ—ನಾವು ರತ್ನಹಾರವನ್ನು ಹುಡುಕಿ ತರುವವರೆಗೂ ಈ ಒಡವೆಯ ಗಂಟು ನಿಮ್ಮಲ್ಲೇ ಇರಲಿ. (ಒಡವೆಯ ಗಂಟನ್ನು ತೋರಿಸುವಳು.)

ವಿದೂಷಕ—(ನೋಡಿ ಯೋಚಿಸುವನು.)

ಚೇಟಿ—ಅಯ್ಯಾ, ಇದೇನು ? ಬಹಳವಾಗಿ ನೋಡುವೆ ? ಇದನ್ನೆಲ್ಲಾದರೂ ಪೂರ್ವದಲ್ಲಿ ನೋಡಿದ್ದೆಯೊ ?

ವಿದೂಷಕ—ಈ ಒಡವೆಗಳಿಗೆ ಮಾಡಿರುವ ಕೆಲಸ ಚೆನ್ನಾಗಿತ್ತು. ಆದುದರಿಂದ ನೋಡಿದೆನು.

ಚೇಟಿ – ಅಯ್ಯೋ ಪಾಪ! ನಿನಗೆ ಚೆನ್ನಾಗಿ ಕಾಣಿಸುವುದಿಲ್ಲ.

ಮೊದಲು ನಮ್ಮಲ್ಲಿದ್ದ ಒಡವೆ ಇದೇ ಆಗಿರಬಹುದೇ ? ನೋಡು.

ವಿದೂಷಕ—(ಸಂತೋಷದಿಂದ) ಆಹಾ ! ಅಹುದಹುದು. ನಮ್ಮ ಮನೆಯಲ್ಲಿ ಕಳ್ಳರು ಕದ್ದುಕೊಂಡು ಹೋಗಿದ್ದುದು ಇದನ್ನೇ.

ಚಾರುದತ್ತ—ಅದೇ ಆಗಿದ್ದರೆ ನನಗೆ ಬಹಳ ಸಂತೋಷ.

ವಿದೂಷಕ—(ಮರೆಯಾಗಿ) ಅಯ್ಯಾ, ಈ ಒಡವೆ ಎಲ್ಲಿಂದ ಬಂದಿತೆಂದು ವಿಚಾರಿಸಲೆ ?

ಚಾರುದತ್ತ—ಅದಕ್ಕೇನು ? ವಿಚಾರಿಸು.

(ವಿದೂಷಕ ಚೇಟಿಯ ಕಿವಿಯಲ್ಲಿ ಹೇಳುವನು).

ಚೇಟಿ—(ವಿದೂಷಕನ ಕಿವಿಯಲ್ಲಿ ಹೇಳುವಳು).

ಚಾರುದತ್ತ—ಇದೇನು ! ಕಿವಿಮಾತನಾಡಿಕೊಳ್ಳುವಿರಿ. ನಾವು ಕೇಳುತಕ್ಕುದಲ್ಲವೋ ?

ವಿದೂಷಕ—(ಚಾರುದತ್ತನ ಕಿವಿಯಲ್ಲಿ ಹೇಳುವನು).

ಚಾರುದತ್ತ—ಎಲೆ ಮಂಗಳಾಂಗಿ, ಸತ್ಯವಾಗಿಯೂ ಇದು ಆ ಒಡವೆಯೋ ?

ಚೇಟಿ—ಆರ್ಯನೆ, ಅದೇ ಒಡವೆ.

ಚಾರುದತ್ತ—ಪ್ರಿಯವಚನವನ್ನು ಹೇಳಿದವರಿಗೆ ನಾನು ಯಾವಾಗಲೂ ಏನನ್ನೂ ಕೊಡದೆ ಇರಲಿಲ್ಲ. ಆದುದರಿಂದ ಇದೊ, ಈ ಉಂಗುರವನ್ನು ತೆಗೆದುಕೊ. (ಬರಿ ಬೆರಳನ್ನು ನೋಡಿಕೊಂಡು ನಾಚಿಕೊಳ್ಳುವನು).

ವಸಂತಸೇನೆ—(ಸ್ವಗತ) ಇಂತಹ ಔದಾರ್ಯ ಗುಣವಿರುವುದರಿಂದಲೇ ನಾನು ನಿನ್ನನ್ನು ಆಶ್ರಯಿಸಿಕೊಂಡಿರುವುದು.

ಚಾರುದತ್ತ—(ಸ್ವಗತ) ಅಯ್ಯೋ ! ಬಡತನವೆನ್ನುವುದು ಬಹು ಕಷ್ಟ ;

ಕಂದ ॥ ಧನರಹಿತಂ ಶುಷ್ಕದ್ರುಮ ।
ವನದಪೊಲಾ ಪಲ್ಗಳಿಲ್ಲದುರಗಂಬೊಲ್ ಜೀ ॥
ವನಮಿಲ್ಲದ ಕೊಳನೆವೊಲೆಸೆ ।
ಯನರಂಕೆಗಳುದಿರ್ದ ಪಕ್ಷಿಯಂತಿರಲಿಳೆಯೊಳ್ ॥

ವಿದೂಷಕ—(ಮರೆಯಾಗಿ) ಅಯ್ಯಾ, ಏಕೆ ಸಂಕಟಪಡುವೆ? ಸುಮ್ಮನಿರು. (ಪ್ರಕಾಶ) ಆರ್ಯೆ, ಈ ಒಡವೆಗಳನ್ನು ಕಟ್ಟಿದ್ದ ವಸ್ತ್ರವು ನಾನು ಸ್ನಾನಕಾಲದಲ್ಲಿ ಉಪಯೋಗಿಸತಕ್ಕುದು. ಅದನ್ನು ಮೊದಲು ಇಲ್ಲಿ ಕೊಡು.

ವಸಂತಸೇನೆ—ಆರ್ಯನೆ, ಇಂತಹ ರತ್ನಾವಳಿಯನ್ನು ಧರಿಸುವುದಕ್ಕೆ ನಾನು ಯೋಗ್ಯಳೆ?

ಚಾರುದತ್ತ—ವಸಂತಸೇನೆ, ನೀನು ಹೇಳಿದುದೇನೋ ಯುಕ್ತವೇ ಸರಿ. ಆದರೂ ಈಗ ನಮಗೆ ಬಂದಿರುವ ದಾರಿದ್ರ್ಯಾವಸ್ಥೆಯಲ್ಲಿ ನಿನ್ನ ಒಡವೆಗಳನ್ನು ಕಳ್ಳನು ಕದ್ದುಕೊಂಡು ಹೋದನೆಂದರೆ ಯಾರುತಾನೇ ನಂಬಿಯಾರು. ಲೋಕಾಪವಾದಕ್ಕೆ ಹೆದರಿ ಇದನ್ನು ಕೊಟ್ಟು ಕಳುಹಿಸಿದೆನು.

ವಿದೂಷಕ—ಎಲೆ ಚೇಟಿ, ನೀನೂ ಇಲ್ಲಿಯೇ ಮಲಗಿಕೊಳ್ಳಬೇಕೋ?

ಚೇಟಿ—(ನಕ್ಕು) ಮೈತ್ರೇಯನೆ, ಏನು? ನಿನ್ನ ಗೃಹಸ್ಥಧರ್ಮವನ್ನು ತೋರಿಸುವೆ.

ವಿದೂಷಕ—ಕುಳಿತುಕೊಳ್ಳುವುದಕ್ಕೂ ಇಲ್ಲದಂತೆ ಈ ಮೇಘಗಳು ಪುನಃ ವರ್ಷಿಸುವುದಕ್ಕೆ ಪ್ರಾರಂಭಿಸಿದುವು.

ಚಾರುದತ್ತ—ಅಹುದು. ನಾವಿನ್ನು ಒಳಕ್ಕೆ ಹೋಗೋಣ ಬನ್ನಿ.

(ಎಲ್ಲರೂ ಹೋಗುವರು)

ಇದು

ದುರ್ದಿನವೆಂಬ ಐದನೆಯಂಕಂ.

———

# ಆರನೆಯಂಕಂ

---

(ಸ್ಥಾನ—ಚಾರುದತ್ತನ ಶಯ್ಯಾಗೃಹ.)

ಚೇಟಿ—(ಬಂದು) ಇದೇನು ! ಇಷ್ಟು ಹೊತ್ತಾದರೂ ನಮ್ಮೊಡತಿಗೆ ಇನ್ನೂ ಎಚ್ಚರವೇ ಆಗಲಿಲ್ಲ ! ಇರಲಿ, ಹೋಗಿ ಎಚ್ಚರಗೊಳಿಸುವೆನು. (ವಸಂತಸೇನೆಯನ್ನು ಕುರಿತು) ಆರ್ಯೆ, ಏಳುಏಳು. ಬೆಳಗಾಯಿತು.

ವಸಂತಸೇನೆ—(ಎಚ್ಚೆತ್ತು) ಏನು ! ಬೆಳಗಾಯಿತೆ ?

ಚೇಟಿ—ಆರ್ಯೆ, ಇದು ನಮಗಂತೂ ಪ್ರಾತಃಕಾಲ. ನಿನ್ನ ಭಾಗಕ್ಕೆ ರಾತ್ರಿಯೇ ಸರಿ.

ವಸಂತಸೇನೆ—ಎಲೌ, ಆ ನಿಮ್ಮ ಜೂಜುಗಾರನೆಲ್ಲಿ ?

ಚೇಟಿ—ಆರ್ಯೆ, ಆರ್ಯಚಾರುದತ್ತನು ನಿನ್ನನ್ನು ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಕರೆತರುವುದೆಂದು ವರ್ಧಮಾನಕನಿಗೆ ಆಜ್ಞಾಪಿಸಿ ಅಲ್ಲಿಗೇ ಹೊರಟುಹೋದನು.

ವಸಂತಸೇನೆ—ಏನೆಂದಾಜ್ಞಾಪಿಸಿದನು ?

ಚೇಟಿ—ನಿನ್ನನ್ನು ಅಲ್ಲಿಗೆ ಕರೆದುಕೊಂಡು ಬಾರೆಂದು.

ರದನಿಕೆ—(ರೋಹಸೇನನೊಡನೆ ಬಂದು) ಮಗುವೆ, ಬಾ. ಬಂಡಿಯನ್ನು ತೆಗೆದುಕೊಂಡು ಆಡೋಣ.

ರೋಹಸೇನ—ರದನಿಕೆ, ಈ ಮಣ್ಣಿನ ಬಂಡಿ ಬೇಡ ನನಗೆ ಚಿನ್ನದ ಬಂಡಿಯೇ ಬೇಕು.

ರದನಿಕೆ—ಅಯ್ಯೋ ! ಕಂದ, ಚಿನ್ನವು ನಮಗೆಲ್ಲಿ ಬಂದೀತು ? ಪುನಃ ಆರ್ಯ ಚಾರುದತ್ತನಿಗೆ ಐಶ್ವರ್ಯ ಬಂದರೆ ಆಗ ಚಿನ್ನದ ಬಂಡಿಯನ್ನು ತೆಗೆದುಕೊಂಡು ಆಡುವೆಯಂತೆ. ಈಗ ಈ ಮಣ್ಣಿನ ಬಂಡಿಯನ್ನೇ ತೆಗೆದುಕೊಂಡು ಆಡು. ವಸಂತಸೇನೆಯ ಸಮೀಪಕ್ಕೆ ಹೋಗೋಣ

ಬಾ. (ವಸಂತಸೇನೆಯ ಬಳಿಗೆ ಬಂದು) ವಸಂತಸೇನೆಯೇ, ವಂದಿಸುವೆನು.

ವಸಂತಸೇನೆ—ರದನಿಕೆ, ಈ ಬಾಲಕನಾರು ? ಅಲಂಕಾರವಿಲ್ಲದಿದ್ದರೂ ಚಂದ್ರಸದೃಶವಾದ ಮುಖದಿಂದ ನನ್ನ ಹೃದಯಕ್ಕೆ ಆನಂದವನ್ನುಂಟುಮಾಡುತ್ತಿರುವನು !

ರದನಿಕೆ—ಇವನು ಆರ್ಯಚಾರುದತ್ತನ ಮಗ. ಇವನ ಹೆಸರು ರೋಹಸೇನನೆಂದು.

ವಸಂತಸೇನೆ—(ಕೈಗಳನ್ನು ನೀಡಿ) ಅಪ್ಪಾ, ಮಗುವೆ, ಬಾ ! (ಆಲಿಂಗಿಸಿಕೊಂಡು) ಈ ಮಗುವಿನ ರೂಪವು ತಂದೆಯ ರೂಪದ ಹಾಗೆಯೇ ಇರುವುದು.

ರದನಿಕೆ—ರೂಪಮಾತ್ರವೇ ಅಲ್ಲ. ಸ್ವಭಾವವೂ ಹಾಗೆಯೇ. ಆರ್ಯಚಾರುದತ್ತನು ಈಗ ಇವನ ಮುಖವನ್ನು ನೋಡಿಕೊಂಡೇ ಕಾಲವನ್ನು ಕಳೆಯುತ್ತಿರುವನು.

ವಸಂತಸೇನೆ—ಅದು ಸರಿ. ಇವನೇಕೆ ಅಳುತ್ತಿರುವನು ?

ರದನಿಕೆ—ಇವನಿಗೆ ಆಡುವುದಕ್ಕಾಗಿ ನೆರೆಮನೆಯಿಂದ ಒಂದು ಚಿನ್ನದ ಬಂಡಿಯನ್ನು ತಂದುಕೊಟ್ಟಿದ್ದೆವು. ಅವರು ಅದನ್ನು ತೆಗೆದುಕೊಂಡು ಹೋದರು. ಆಮೇಲೆ ಇವನು ಅಳುತ್ತಿದ್ದುದನ್ನು ನೋಡಿ ಈ ಮಣ್ಣಿನ ಬಂಡಿಯನ್ನು ಮಾಡಿಕೊಟ್ಟೆನು ; ಈಗ ನನಗೆ ಮಣ್ಣಿನಬಂಡಿ ಬೇಡ. ಚಿನ್ನದ ಬಂಡಿಯೇ ಬೇಕು—ಎಂದು ಅಳುತ್ತಿರುವನು.

ವಸಂತಸೇನೆ—ಹಾ ! ವಿಧಿಯೆ ! ನೀನು ಜನಗಳ ಸರ್ವಸ್ವವನ್ನೂ ಅಪಹರಿಸಿಕೊಂಡು ಅವರು ಬಡತನದಿಂದ ಸಂಕಟಪಡುತ್ತಿದ್ದರೆ ಅದನ್ನು ನೋಡಿಯೂ ಸಹಿಸಿಕೊಂಡಿರಲಾರೆಯಾ ? (ಕಣ್ಣೀರು ಸುರಿಸುತ್ತ) ಮಗುವೆ, ಅಳಬೇಡ ಅಳಬೇಡ. ಪುನಃ ಚಿನ್ನದ ಬಂಡಿಯನ್ನೇ ಇಟ್ಟುಕೊಂಡು ಆಡುವೆ.

ರೋಹಸೇನ—ರದನಿಕೆ, ಈಕೆ ಯಾರು ?

ವಸಂತಸೇನೆ—ನಿಮ್ಮ ತಂದೆಯ ಗುಣಗಳಿಗೆ ಸೋತಿರುವ ದಾಸಿ.

ರದನಿಕೆ—ಅಪ್ಪಾ, ಈಕೆಯೂ ನಿಮ್ಮ ತಾಯಿ.

ರೋಹಸೇನ—ರದನಿಕೆ, ನೀನು ಹೇಳುವ ಮಾತು ಸುಳ್ಳು. ನಮ್ಮ ತಾಯಿಗೆ ಒಡವೆಯೆಲ್ಲಿಂದ ಬಂದೀತು ?

ವಸಂತಸೇನೆ—ಮಗುವೆ, ನಿನ್ನ ಮುದ್ದುಮಾತನ್ನು ಕೇಳಿದರೆ ನನ್ನ ಮನಸ್ಸು ಕರಗಿಹೋಗುವುದು. (ಒಡವೆಗಳನ್ನು ತೆಗೆದು ಅಳುತ್ತ) ಈಗ ನಾನು ನಿಮ್ಮ ತಾಯಾವೆನು. ಈ ಒಡವೆಗಳನ್ನು ತೆಗೆದುಕೊಂಡು ಚಿನ್ನದ ಬಂಡಿಯನ್ನು ಮಾಡಿಸಿಕೊ.

ರೋಹಸೇನ—ಹೋಗು ಹೋಗು, ನಾನು ತೆಗೆದುಕೊಳ್ಳುವುದಿಲ್ಲ. ನೀನು ಅಳುತ್ತೀಯೆ.

ವಸಂತಸೇನೆ—(ಸ್ವಗತ) ಅಯ್ಯೋ, ನಾನು ಅತ್ತರೆ ಒಡವೆಯನ್ನು ಕೊಡಲಾರದೆ ಅತ್ತೆನೆಂದು ಈ ಮಗು ತಿಳಿದುಕೊಂಡಿತಲ್ಲ. (ಕಣ್ಣೀರ ನ್ನೊರಸಿಕೊಂಡು) ಮಗುವೆ, ನಾನು ಅಳುವುದಿಲ್ಲ. ಚಿನ್ನದ ಬಂಡಿಯನ್ನು ಮಾಡಿಸಿಕೊಂಡು ಆಡು ; ಹೋಗು. (ಒಡವೆಯನ್ನು ಮಣ್ಣಿನ ಬಂಡಿಯಲ್ಲಿ ತುಂಬುವಳು.)

ರದನಿಕೆ—(ಮಗುವಿನೊಡನೆ ಹೋಗುವಳು.)

ವರ್ಧಮಾನಕ—(ಬಂದು) ರದನಿಕೆ, ಬೀದಿಯ ಬಾಗಿಲಲ್ಲಿ ರಥವು ಸಿದ್ಧವಾಗಿರುವುದೆಂದು ವಸಂತಸೇನೆಗೆ ತಿಳಿಸು.

ರದನಿಕೆ—( ವಸಂತಸೇನೆಯನ್ನು ಕುರಿತು ) ಆರ್ಯೆ, ರಥವು ಸಿದ್ಧವಾಗಿರುವುದೆಂದು ವರ್ಧಮಾನಕನು ವಿಜ್ಞಾಪಿಸುವನು.

ವಸಂತಸೇನೆ—ರದನಿಕೆ, ಸ್ವಲ್ಪ ತಾಳು. ಅಲಂಕಾರಮಾಡಿ ಕೊಳ್ಳುವೆನು.

ರದನಿಕೆ—(ಪುನಃ ಬಂದು) ವರ್ಧಮಾನಕನೆ, ವಸಂತಸೇನೆ ಅಲಂ ಕರಿಸಿಕೊಳ್ಳುವವರೆಗೂ ಸ್ವಲ್ಪ ನಿಲ್ಲು.

ವರ್ಧಮಾನಕ—ಆಹಾ ! ನಾನು ರಥದಲ್ಲಿ ಹಾಸುವ ಹಾಸಿಗೆ ಯನ್ನು ಮರೆತುಬಂದೆನು. ಈ ರಥವನ್ನು ತೆಗೆದುಕೊಂಡು ಹೋಗಿ ಅದನ್ನು ಜಾಗ್ರತೆಯಾಗಿ ತೆಗೆದುಕೊಂಡು ಬರುವೆನು. (ರಥದೊಡನೆ ಹಿಂದಕ್ಕೆ ಹೋಗುವನು).

ಸ್ಥಾವರಕ—(ಶಕಾರನ ರಥವನ್ನು ತೆಗೆದುಕೊಂಡು ಬಂದು) ರಥ

ವನ್ನು ತೆಗೆದುಕೊಂಡು ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಬಾರೆಂದು ಶಕಾರನು ನನಗಾಜ್ಞಾಪಿಸಿದ್ದನು. ಆದುದರಿಂದ ಅಲ್ಲಿಗೆ ಹೋಗುವೆನು. (ಸ್ವಲ್ಪದೂರ ಹೋಗಿ ನೋಡಿ) ಈ ದಾರಿಯಲ್ಲಿ ಹೋಗುವುದಕ್ಕೆ ಸ್ವಲ್ಪವೂ ಅವಕಾಶವಿಲ್ಲದಂತೆ ಬಂಡಿಗಳು ಹೋಗುತ್ತಿರುವುವಲ್ಲ. ಏನು ಮಾಡಲಿ? ಎಲೋ! ಅಲ್ಲಿ ಯಾರು? ದಾರಿ ಬಿಡಿ! ಏನು? ಈ ರಥವು ಯಾರ ಮನೆಯದೆಂದು ಕೇಳುವಿರೋ? ರಾಜಶ್ಯಾಲಕನಾದ ಶಕಾರನ ರಥ. ಬೇಗ ದಾರಿಬಿಡಿ! ಏನು? ನೀನು ಬಂದು ಸ್ವಲ್ಪ ಚಕ್ರವನ್ನು ತಳ್ಳು ಎಂದು ಹೇಳುವೆಯೋ? ನಾನು ರಾಜಶ್ಯಾಲಕನಾದ ಶಕಾರನ ಸಾರಥಿ. ನಾನು ಬಂದು ನಿನ್ನ ಬಂಡಿಯ ಚಕ್ರವನ್ನು ತಳ್ಳಲೊ? ಅಥವಾ ಏನೋ ಪಾಪ! ಒಬ್ಬನೇ ಇರುವೆ. ಈ ರಥವನ್ನು ಆರ್ಯ ಚಾರುದತ್ತನ ಮನೆಯ ಬಾಗಿಲಲ್ಲ ನಿಲ್ಲಿಸಿ, ಅಲ್ಲಿ ಬಂದು ಸ್ವಲ್ಪ ಸಹಾಯಮಾಡುವೆನು. (ಚಾರುದತ್ತನ ಮನೆಯ ಬಾಗಿಲಲ್ಲಿ ರಥವನ್ನು ನಿಲ್ಲಿಸಿ) ಇದೊ, ಬಂದೆನು. (ಎಂದು ಹೋಗುವನು).

ರದನಿಕೆ—ಆರ್ಯೆ, ಇದೇನು? ಚಕ್ರಗಳ ಸದ್ದಾಗುವುದು. ರಥ ಬಂದಿರಬಹುದು.

ವಸಂತಸೇನೆ—ರದನಿಕೆ, ಜಾಗ್ರತೆಯಾಗಿ ನಡೆ, ಹೋಗೋಣ. (ಎಂದು ರಥದ ಸಮೀಪಕ್ಕೆ ಬಂದು) ರದನಿಕೆ, ನೀನು ಹೋಗಿ ವಿಶ್ರಮಿಸಿಕೊ.

ರದನಿಕೆ—ಅಪ್ಪಣೆ. (ಎಂದು ಹೋಗುವಳು).

ವಸಂತಸೇನೆ—(ರಥವನ್ನು ಹತ್ತಿ) ಇದೇನು! ನನ್ನ ಬಲಗಣ್ಣು ಅದುರುವುದು. ಅಥವಾ ಇವಕ್ಕೆಲ್ಲ ನಾನೇಕೆ ಯೋಚಿಸಬೇಕು. ಆರ್ಯ ಚಾರುದತ್ತನ ದರ್ಶನವೇ ಈ ದುಶ್ಶಕುನಗಳನ್ನೆಲ್ಲ ಪರಿಹರಿಸಬಲ್ಲುದು.

ಸ್ಥಾವರಕ—(ಬಂದು) ಬಂಡಿಗಳನ್ನು ತಳ್ಳಿ ದಾರಿ ಬಿಡಿಸಿರುವೆನು. ಇನ್ನು ಹೋಗಬಹುದು. (ರಥವನ್ನು ಹತ್ತಿ ನಡೆಯಿಸುತ್ತ) ಇದೇನು? ರಥವು ಸ್ವಲ್ಪ ಭಾರವಾಗಿರುವಂತೆ ತೋರುವುದು! ಅಥವಾ ನಾನು ಚಕ್ರವನ್ನು ತಳ್ಳಿ ಶ್ರಮಪಟ್ಟು ಬಂದುದರಿಂದ ನನಗೆ ಹೀಗೆ ತೋರುವುದೋ ಏನೋ! (ಮುಂದಕ್ಕೆ ನಡೆಯಿಸುವನು).

ತೆರೆಯಲ್ಲಿ—ಅಯ್ಯಾ, ದ್ವಾರಪಾಲಕರಿರಾ, ನಿಮ್ಮ ನಿಮ್ಮ ಠಾಣ ಗಳಲ್ಲಿ ನೀವು ಬಹಳ ಜಾಗರೂಕರಾಗಿರಬೇಕು. ಬಂಧನದಲ್ಲಿದ್ದ ಆರ್ಯಕನು ಅಲ್ಲಿದ್ದ ಕಾವಲುಗಾರರನ್ನು ಹೊಡೆದು, ಸಂಕಲೆಯನ್ನು ಕಿತ್ತುಕೊಂಡು ತಪ್ಪಿಸಿಕೊಂಡಿರುವನು. ಅವನೆಲ್ಲಿಗೂ ಓಡಿಹೋಗದಂತೆ ಹುಡುಕಿ ಹಿಡಿಯಿರಿ.

ಆರ್ಯಕ—(ಕಾಲಿನ ಸಂಕಲೆಯೊಡನೆ ಮುಸುಕುಹಾಕಿಕೊಂಡು ಓಡಿಬಂದು) ಪಾಲಕಮಹಾರಾಜನು ಸಿದ್ಧನ ಮಾತಿಗೆ ಹೆದರಿ ನನ್ನನ್ನು ಹಳ್ಳಿಯಿಂದ ಹಿಡಿತರಿಸಿ, ಸೆರೆಮನೆಯಲ್ಲಿಟ್ಟಿದ್ದನು. ಮಹಾತ್ಮನಾದ ಶರ್ವಿಳ ಕನು ಅತಿಸಾಹಸವನ್ನು ಮಾಡಿ ಒಂದು ಕಾಲಿನ ಸಂಕಲೆಯನ್ನು ಮಾತ್ರ ಕತ್ತರಿಸಿ ನನಗೆ ಸೆರೆಯನ್ನು ತಪ್ಪಿಸಿದನು. (ಕಣ್ಣೀರನ್ನು ಬಿಟ್ಟು) ನಾನುಬೇರೆ ಪಾಲಕನನ್ನು ದ್ವೇಷಿಸಿ ಅವನ ದೊರೆತನಕ್ಕೆ ಆಸೆಪಟ್ಟವನಲ್ಲ. ನನಗೆ ರಾಜ್ಯಪ್ರಾಪ್ತಿಯಾಗುವಹಾಗೆ ದೈವಸಂಕಲ್ಪವಿದೆಯೆಂದು ಸಿದ್ಧನು ಹೇಳಿದುದಕ್ಕೆ ನನ್ನದೇನು ಅಪರಾಧ? ಅಯ್ಯೋ! ನನ್ನನ್ನು ಅನ್ಯಾಯವಾಗಿ ಸೆರೆಯಲ್ಲಿಟ್ಟಿದ್ದನಲ್ಲಾ! ನಿರ್ಭಾಗ್ಯನಾದ ನಾನು ಈಗೆಲ್ಲಿ ಹೋಗಲಿ? (ಮುಂದೆ ನೋಡಿ) ಗೋಡೆಗಳೆಲ್ಲಾ ಬಿದ್ದು ಶಿಥಿಲ ವಾಗಿರುವ ಈ ದೊಡ್ಡಮನೆ ಯಾವನೋ ಒಬ್ಬ ಸಾಹುಕಾರನದಾಗಿರ ಬಹುದು. ಈ ಮನೆಯವನೂ ನನ್ನಂತೆಯೇ ಕಷ್ಟಪಡುತ್ತಿರಬಹುದು. ಇಲ್ಲಿ ಹೋಗಿ ರಹಸ್ಯವಾಗಿ ಅವಿತುಕೊಳ್ಳುವೆನು. (ಬಂಡಿಯ ಸದ್ದನ್ನು ಕೇಳಿ) ಓಹೋ! ರಥವು ಇತ್ತಕಡೆ ಬರುತ್ತಿದೆ. ಇದು ಎಲ್ಲಿಗೆ ಹೋಗ ತಕ್ಕುದೊ? ಯಾವ ದೊಡ್ಡಮನುಷ್ಯನದೊ? ಯಾರಾದರೂ ಆಗಲಿ; ಇದನ್ನು ದೈವವೇ ನನಗನುಕೂಲಮಾಡಿಕೊಟ್ಟ ಹಾಗಾಯಿತು.

ವರ್ಧಮಾನಕ—(ಬಂಡಿಯನ್ನು ಹೊಡೆದುಕೊಂಡು ಬಂದು) ರದ ನಿಕೆ, ರಥವು ಸಿದ್ಧವಾಗಿರುವುದು. ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಹೊರಡಬಹುದೆಂದು ವಸಂತಸೇನೆಗೆ ತಿಳಿಸು.

ಆರ್ಯಕ—(ಕೇಳಿ) ಈಗ ತಿಳಿಯಿತು. ಇದು ಸೂಳೆಯರ ಬಂಡಿ. ಆಗಲಿ; ಹತ್ತುವೆನು. (ಮುಂದೆ ಬರುವನು).

ವರ್ಧಮಾನಕ—(ಸರಪಣಿಯ ಸದ್ದನ್ನು ಕೇಳಿ ಸ್ವಗತ) ಇದೇನು! ಕಾಲಕಡಗದ ಸದ್ದಾಗುವುದು. ವಸಂತಸೇನೆ ಬಂದಿರಬಹುದು.

(ಪ್ರಕಾಶ) ವಸಂತಸೇನೆ, ಎತ್ತುಗಳು ಬೆದರುವುವು. ಆದುದರಿಂದ ರಥವನ್ನು ಹಿಂಭಾಗದಿಂದಲೇ ಹತ್ತು.

ಆರ್ಯಕ—(ಹಿಂಭಾಗದಿಂದ ರಥವನ್ನು ಹತ್ತುವನು).

ವರ್ಧಮಾನಕ—ಕಾಲುಕಡಗದ ಶಬ್ದವು ಕೇಳಿಸಿತು. ರಥವು ಭಾರವಾಗಿರುವುದು. ವಸಂತಸೇನೆಯು ರಥವನ್ನು ಹತ್ತಿದ್ದಾಳು. ಇನ್ನು ಬಂಡಿಯನ್ನು ಮುಂದಕ್ಕೆ ಬಿಡುವೆನು. (ಎಂದು ಬಿಡುವನು).

ವೀರಕ—(ಬಂದು) ಅಯ್ಯಾ, ಮಾನಕಭದ್ರಕರೇ, ಸೆರೆಯಲ್ಲಿದ್ದ ಆರ್ಯಕನು ಸಂಕಲೆಯನ್ನು ಕಿತ್ತುಕೊಂಡು ಎಲ್ಲೋ ಪಲಾಯನ ಮಾಡಿದನು. ಇದನ್ನು ಕೇಳಿ ಪಾಲಕಮಹಾರಾಜನು ಬಹಳ ಚಿಂತಾ ಕ್ರಾಂತನಾಗಿರುವನು. ಆದುದರಿಂದ ನೀವು ಬಹಳ ಜಾಗರೂಕರಾಗಿರಿ. ನಾಲ್ಕು ದಿಕ್ಕಿನಲ್ಲಿಯೂ ಹುಡುಕಿ ಅವನನ್ನು ಹಿಡಿಯಿರಿ. ನಾನೂ ಚಂದ ನಕನೂ ಈ ಕೋಟೆಯಮೇಲೆ ಹತ್ತಿ ನೋಡುವೆವು. (ಎಂದು ಹೇಳಿ) ಚಂದನಕ ! ಚಂದನಕ ! (ಎಂದು ಕೂಗುವನು).

ಚಂದನಕ—(ಗಾಬರಿಯಿಂದ ಬಂದು) ಅಯ್ಯಾ, ಮಾನಕಪ್ರಭೃತಿ ಗಳಿರಾ, ಆರ್ಯಕನು ಸೆರೆಮನೆಯಿಂದ ತಪ್ಪಿಸಿಕೊಂಡು ಎಲ್ಲೋ ಓಡಿ ಹೋಗಿರುವನು. ಅವನನ್ನು ಅಂಗಡಿಬೀದಿಗಳಲ್ಲಿಯೂ, ಹಳ್ಳಿಗಳಲ್ಲಿಯೂ, ಇತರ ಸ್ಥಳಗಳಲ್ಲಿಯೂ ಹುಡುಕಿ ಹಿಡಿದು, ನಮ್ಮ ಪಾಲಕಮಹಾರಾಜನಿಗೆ ದೊರೆತನ ಹೋಗದಂತೆ ಮಾಡಬೇಕು. (ಮುಂದಕ್ಕೆ ಬಂದು ಬಂಡಿ ಯನ್ನು ನೋಡಿ) ಎಲೋ ವೀರಕ, ನೋಡು ನೋಡು. ಈ ರಾಜ ಮಾರ್ಗದಲ್ಲಿ ಒಂದು ಬಂಡಿಯು ಹೋಗುತ್ತಿರುವುದು. ಇದು ಯಾರದು? ಎಲ್ಲಿಂದ ಬಂದಿತು? ಎಲ್ಲಿಗೆ ಹೋಗುವುದು ? ವಿಚಾರಿಸು.

ವೀರಕ—ಎಲೋ, ಬಂಡಿಯವನೆ, ನಿಲ್ಲಿಸು ; ಈ ಬಂಡಿ ಯಾರದು ? ಇದರಲ್ಲಿ ಕುಳಿತಿರುವವರಾರು ? ಎಲ್ಲಿಗೆ ಹೋಗುವುದು ?

ವರ್ಧಮಾನಕ—ಇದು ಚಾರುದತ್ತನ ರಥ. ಇದರಲ್ಲಿ ವಸಂತ ಸೇನೆ ಕುಳಿತಿರುವಳು. ಇದನ್ನು ಪುಷ್ಪಕರಂಡಕ ಜೀರ್ಣೋದ್ಯಾನದಲ್ಲಿ ರುವ ಚಾರುದತ್ತನ ಸಮೀಪಕ್ಕೆ ತೆಗೆದುಕೊಂಡು ಹೋಗುವೆನು.

ಚಂದನಕ—ಹಾಗಾದರೆ ಹೊರಟುಹೋಗಲಿ.

ವೀರಕ--ನಾವು ನೋಡದೆಯೇ ?

ಚಂದನಕ—ನೋಡುವುದೇನು ?

ವೀರಕ—ಯಾವ ನಂಬಿಕೆಯಿಂದ ನೋಡದೆ ಬಿಡುವುದು ?

ಚಂದನಕ—ಚಾರುದತ್ತನ ನಂಬಿಕೆಯಿಂದ.

ವೀರಕ—ಚಾರುದತ್ತನಾರು ? ವಸಂತಸೇನೆ ಯಾರು? ಬಂಡಿಯನ್ನು ನೋಡದೆ ಬಿಡುವುದೆಂದರೇನು ?

ಚಂದನಕ—ಚಾರುದತ್ತನನ್ನೂ ವಸಂತಸೇನೆಯನ್ನೂ ನೀನು ಕಾಣದಪಕ್ಷದಲ್ಲಿ ಚಂದ್ರಿಕಾಸಹಿತನಾದ ಚಂದ್ರನನ್ನೂ ನೀನು ಕಾಣೆ.

ವೀರಕ—ಎಲೋ, ಚಂದನಕ, ಚಾರುದತ್ತನನ್ನೂ ಬಲ್ಲೆನು. ವಸಂತಸೇನೆಯನ್ನೂ ಬಲ್ಲೆನು. ಆದರೆ ರಾಜಕಾರ್ಯ ಬಂದಾಗ ಮಾತ್ರ ತಂದೆಯನ್ನೂ ಕಾಣೆನು.

ಚಂದನಕ—ನೀನು ದೊರೆಗೆ ಬಹಳ ಆಪ್ತನಾದ ಸೇನಾಪತಿ. ಆದುದರಿಂದ ನಾನು ಎತ್ತುಗಳನ್ನು ಹಿಡಿದುಕೊಳ್ಳುವೆನು. ನೀನು ರಥದ ಮೇಲಕ್ಕೆ ಹತ್ತಿ ಯಾರು ಇರುವರೋ ನೋಡು.

ವೀರಕ—ಹಾಗಲ್ಲ ಹಾಗಲ್ಲ. ನೀನು ಹೇಳಿದ ಮಾತಿನಲ್ಲೇ ದೊರೆಗೆ ನಂಬಿಕೆ ಹೆಚ್ಚು. ನೀನೇ ನೋಡು.

ಚಂದನಕ—ನಾನು ನೋಡಿದುದಾಯಿತು. ನೀನೇ ನೋಡಬೇಕು.

ವೀರಕ—ಸರಿ. ನೀನು ನೋಡಿದಮೇಲೆ ದೊರೆಯೇ ನೋಡಿದಹಾಗಾಯಿತು.

ಚಂದನಕ—(ರಥದಮೇಲಕ್ಕೆ ಹತ್ತುವನು).

ಆರ್ಯಕ—ಆರ್ಯನೇ, ನಿನಗೆ ಶರಣಾಗತನಾಗಿರುವೆನು.

ಚಂದನಕ—ಹೆದರಬೇಡ ಹೆದರಬೇಡ. (ಸ್ವಗತ) ಈ ಆರ್ಯಕನು ನಮ್ಮ ಕೈಗೆ ಸಿಕ್ಕಿದುದು ಗಿಡಗನಿಗೆ ಹೆದರಿ ಹಾರಿಹೋಗುವ ಹಕ್ಕಿಯು ಬೇಡನಕೈಗೆ ಸಿಕ್ಕಿದಹಾಗಾಯಿತು. ಈತನು ದೊರೆಗೆ ಅಪರಾಧಮಾಡಿದವನಲ್ಲ. ಇದಲ್ಲದೆ ನಮ್ಮ ಶರ್ವಿಳಕನಿಗೆ ಪರಮಮಿತ್ರನಾದವನು. ಈತನನ್ನು ಬಿಟ್ಟುಬಿಡೋಣವೆಂದರೆ, ರಾಜಾಜ್ಞೆಯನ್ನು ಮೀರಿದಂತಾಗುವುದು ;

ಈಗೇನುಮಾಡಲಿ ? (ಎಂದು ಯೋಚಿಸಿ) ಅಥವಾ ಇನ್ನೇನು ಮಾಡ ತಕ್ಕುದು ? ಆದುದಾಗಲಿ ; ಮೊದಲೇ ಇವನಿಗೆ ಅಭಯಪ್ರದಾನಮಾಡಿರುವೆನು. (ಎಂದು ರಥದಿಂದ ಇಳಿದು) ಅಯ್ಯಾ, ವೀರಕನೆ, ಆರ್ಯಕನನ್ನು ನೋಡಿದೆನು, ಅಲ್ಲ ಅಲ್ಲ ; ಆರ್ಯೆಯನ್ನು. "ನಾನು ಚಾರುದತ್ತನ ಸಮೀಪಕ್ಕೆ ಹೋಗುತ್ತಿರುವಾಗ ನನ್ನನ್ನು ತಡೆದು ರಾಜಮಾರ್ಗದಲ್ಲಿ ಹೀಗೆ ಅವಮಾನಮಾಡುವುದು ಯುಕ್ತವಲ್ಲ" ಎಂದು ಈ ವಸಂತ ಸೇನೆಯು ಹೇಳುವಳು.

ವೀರಕ—ಅಯ್ಯಾ, ಚಂದನಕನೆ, ಈ ವಿಷಯದಲ್ಲಿ ನನಗೇನೋ ಸಂದೇಹವುಂಟಾಗಿರುವುದು.

ಚಂದನಕ—ನಿನಗೇಕೆ ಸಂದೇಹ ?

ವೀರಕ—ಇದೇನಯ್ಯಾ ? ಮೊದಲು ನೀನು "ಆರ್ಯಕನನ್ನು ನೋಡಿದೆನು" ಎಂದೆ. ಆಮೇಲೆ ಗಾಬರಿಯಿಂದ, "ಆರ್ಯೆಯನ್ನು ನೋಡಿದೆನು" ಎನ್ನುವೆ. ನನಗೇನೋ ಸಂದೇಹವಾಗಿದೆ. ಆದುದರಿಂದ ನಾನೇ ನೋಡುವೆನು. ನನ್ನಲ್ಲಿಯೇ ದೊರೆಗೆ ನಂಬಿಕೆ.

ಚಂದನಕ—ಆದರೆ ನನ್ನಲ್ಲಿ ನಂಬಿಕೆಯಿಲ್ಲವೊ ?

ವೀರಕ—ಅದೇನೋ ? ರಾಜಾಜ್ಞೆಯನ್ನು ಸರಿಯಾಗಿ ನೆರವೇರಿಸ ಬೇಕು.

ಚಂದನಕ—(ಸ್ವಗತ) ಆರ್ಯಕನು ಚಾರುದತ್ತನ ರಥದಮೇಲೆ ಹತ್ತಿ ಓಡಿಹೋಗುತ್ತಿದ್ದನೆಂದು ನಾವು ಹೇಳಿದರೆ ದೊರೆಯು ಚಾರುದತ್ತ ನನ್ನು ಶಿಕ್ಷಿಸದೆ ಬಿಡನು. ಇದಕ್ಕೇನುಪಾಯಮಾಡಲಿ ? (ಯೋಚಿಸಿ) ಇರಲಿ, ಇದಕ್ಕೆ ತಕ್ಕುದನ್ನು ಮಾಡುವೆನು. (ಪ್ರಕಾಶ) ಎಲೋ, ನಾನು ನೋಡಿದುದನ್ನು ಪುನಃ ನೋಡುವುದಕ್ಕೆ ನೀನಾರು ?

ವೀರಕ—ನನ್ನನ್ನು ತಡೆಯುವುದಕ್ಕೆ ನೀನಾರು ?

ಚಂದನಕ—(ಕೋಪದಿಂದ) ನೀನು ಯಾರೋ ? ನಿನ್ನ ಜಾತಿ ಯನ್ನೂ ಕೂಡ ಸ್ಮರಿಸದೆ, ದೊಡ್ಡಮನುಷ್ಯನಂತೆ ನಟಿಸುವೆ.

ವೀರಕ—ಏನು ? ನನ್ನ ಜಾತಿ ಯಾವುದು ?

ಚಂದನಕ—ಹೇಳಲೋ ?

ವೀರಕ—ಹೇಳು.

ಚಂದನಕ—ಬೇಡಬೇಡ. ಮನಸ್ಸಿನಲ್ಲೇ ಇರಲಿ. ಬೇಲದ ಕಾಯಿ ಒಡೆದಮೇಲೆ ಹೋಯಿತು.

ವೀರಕ—ಇಲ್ಲ ಇಲ್ಲ, ಹೇಳು.

ಚಂದನಕ—(ಬೆರಲಿನಿಂದ ಕ್ಷೌರಕತ್ತಿ ಮಸೆಯುವಂತೆ ಸನ್ನೆಮಾಡಿ) ಇಂತಹ ನೀನು ಈಗ ಸೇನಾಪತಿಯಾಗಿರುವೆ !

ವೀರಕ—ನಿನ್ನ ಜಾತಿಯೇನು ! ಬಹಳ ಶ್ರೇಷ್ಠವಾದುದೊ ?

ಚಂದನಕ—ಎಲೋ, ನಮ್ಮ ಜಾತಿಯನ್ನೇನು ಹೇಳುವೆ? ಚಂದ್ರನಂತೆ ಬಹು ಪರಿಶುದ್ಧವಾದುದು.

ವೀರಕ—ಅದನ್ನು ನಾನು ಹೇಳಲೋ ?

ಚಂದನಕ—ಹೇಳು ಹೇಳು ?

ವೀರಕ--(ಪಾದರಕ್ಷೆ ಹೊಲಿಯುವಂತೆ ಸನ್ನೆಮಾಡಿ) ಆಃ ! ಬಹಳ ಪರಿಶುದ್ಧವಾದುದು.

ಚಂದನಕ--ಅಹುದಯ್ಯಾ, ನಾನು ಚಮ್ಮಾರ. ನಾನು ನೋಡಿ ಪ್ರಯೋಜನವಿಲ್ಲ. ನೀನಾದರೆ ಕ್ಷೌರಕ, ನೀನೇ ನೋಡು.

ವೀರಕ--ಎಲೋ, ಸ್ವಲ್ಪ ಬಂಡಿಯನ್ನು ತಿರುಗಿಸು ; ನೋಡಬೇಕು. (ಹೋಗುವನು).

ಚಂದನಕ--(ವೀರಕನನ್ನು ಜುಟ್ಟು ಹಿಡಿದೆಳೆದು, ಕೆಳಕ್ಕೆ ಕೆಡವಿ, ಒದೆದು) ನಾನು ನೋಡಿದುದನ್ನು ಪುನಃ ನೋಡುವುದಕ್ಕೆ ನೀನಾರು ?

ವೀರಕ--(ಕೋಪದಿಂದೆದ್ದು) ಎಲೋ, ರಾಜಾಜ್ಞೆಯನ್ನು ಮೀರಬಾರದೆಂದು ರಥವನ್ನು ಹತ್ತುತ್ತಿದ್ದರೆ ನನ್ನ ಜುಟ್ಟನ್ನು ಹಿಡಿದೆಳೆದು, ಕೆಳಕ್ಕೆ ಕೆಡವಿ, ಒದೆದು, ಹೀಗೆಲ್ಲಾ ಮಾಡಿದ್ದೀಯೆ. ಇರಲಿ ; ನಿನ್ನನ್ನು ನ್ಯಾಯಸ್ಥಾನಕ್ಕೆ ಕರೆಯಿಸಿ, ನಿನಗೆ ತಕ್ಕುದನ್ನು ಮಾಡಿಸದೆ ಇದ್ದರೆ ನಾನು ವೀರಕನೇ ಅಲ್ಲ.

ಚಂದನಕ--ಎಲೋ, ನ್ಯಾಯಸ್ಥಾನಕ್ಕಾದರೂ ಹೋಗು. ರಾಜಾಸ್ಥಾನಕ್ಕಾದರೂ ಹೋಗು. ನೀನು ನಾಯಿ ! ನಿನ್ನಿಂದೇನಾದೀತು !

ವೀರಕ--ಇರಲಿ ಇರಲಿ. (ಎಂದು ಹೋಗುವನು).

ಚಂದನಕ--(ಸುತ್ತಲೂ ನೋಡಿ) ಎಲೋ, ಬಂಡಿಯನ್ನು ಜಾಗ್ರತೆಯಾಗಿ ಮುಂದಕ್ಕೆ ಬಿಡು. ವಸಂತಸೇನೆ, ಯಾರಾದರೂ ದಾರಿಯಲ್ಲಿ ನಿನ್ನನ್ನು ಕೇಳಿದರೆ ಚಂದನಕವೀರಕರು ಪರೀಕ್ಷಿಸಿರುವರೆಂದು ಹೇಳಿ, ಈ ಗುರುತನ್ನು ತೋರಿಸು. (ಎಂದು ಕತ್ತಿಯನ್ನು ಕೊಡುವನು.)

ಆರ್ಯಕ--(ತೆಗೆದುಕೊಂಡು, ಸಂತೋಷದಿಂದ ಸ್ವಗತ) ಭಾಪು! ಭಾಪು! ದೈವಯೋಗದಿಂದ ಈ ಕತ್ತಿಯೊಂದು ಸಿಕ್ಕಿತು. ಬಲದ ಭುಜವ್ ಚಲಿಸುತ್ತಿರುವುದು. ಇನ್ನು ನಾನು ಬದುಕಿದೆನು.

ಚಂದನಕ--ವಸಂತಸೇನೆ, ನನ್ನನ್ನು ಮಾತ್ರ ಮರೆಯಬೇಡ. ನಿನ್ನ ಸ್ನೇಹವು ನನ್ನಲ್ಲ ಸಂಪೂರ್ಣವಾಗಿರಲಿ.

ವರ್ಧಮಾನಕ-(ಗಾಡಿಯನ್ನು ಹೊಡೆದುಕೊಂಡು ಹೋಗುವನು).

ಚಂದನಕ--(ಮುಂದೆನೋಡಿ) ಓಹೋ! ನಮ್ಮ ಶರ್ವಿಳಕನು ಇಲ್ಲಿ ಹೋಗುತ್ತಿರುವನು. ನಮಗೆಲ್ಲಾ ಗೊತ್ತುಗಾರನಾದ ವೀರಕನು ದೊರೆಗೂ ಬೇಕಾದವನು. ಅಂತಹನ ಸಂಗಡ ವಿರೋಧಮಾಡಿಕೊಂಡೆನು—ಆದುದರಿಂದ ಈ ಶರ್ವಿಳಕನ ಸಂಗಡಲೇ ಹೊರಟುಹೋಗುವೆನು. (ಎಂದು ಹೋಗುವನು.)

ಇದು

ಪ್ರವಹಣವಿಪರ್ಯಯವೆಂಬ ಆರನೆಯಂಕಂ

———

# ಏಳನೆಯಂಕಂ

---

(ಸ್ಥಾನ–ಉದ್ಯಾನ.)

ಚಾರುದತ್ತ—(ವಿದೂಷಕನೊಡನೆ) ಮೈತ್ರೇಯನೆ, ವರ್ಧಮಾನಕನೇಕೆ ಇನ್ನೂ ಬರಲಿಲ್ಲ ?

ವಿದೂಷಕ—ವಸಂತಸೇನೆಯನ್ನು ಜಾಗ್ರತೆಯಾಗಿ ಕರೆದುಕೊಂಡು ಬಾರೆಂದು ನಾನೂ ಹೇಳಿದೆನು. ಆದರೂ ಇನ್ನೂ ಬರಲಿಲ್ಲ.

ಚಾರುದತ್ತ—ಯಾವುದಾದರೂ ಮೆಲ್ಲಗೆ ಬರುತ್ತಿರುವ ರಥವನ್ನು ಅನುಸರಿಸಿ ರಥವನ್ನು ತರುತ್ತಿರುವನೋ ? ಅಥವಾ ದೂರಿಯು ಮುರಿದುಹೋಯಿತೊ ? ದಾರಿಯೇ ತಪ್ಪಿತೋ ? ಎತ್ತುಗಳನ್ನು ಸ್ವಚ್ಛಂದವಾಗಿ ಬಿಟ್ಟುಕೊಂಡು ಬರುತ್ತಿರುವನೋ ? ಯಾವುದೂ ತಿಳಿಯದು.

ವರ್ಧಮಾನಕ—(ಬಂದು) ಆರ್ಯ ಮೈತ್ರೇಯನೆ.

ವಿದೂಷಕ—ಮಿತ್ರನೆ, ನಿನಗೊಂದು ಸಂತೋಷವೃತ್ತಾಂತವನ್ನು ಹೇಳುವೆನು. ವರ್ಧಮಾನಕನ ಧ್ವನಿಯಾಗುವುದು. ವಸಂತಸೇನೆ ಬಂದಿರಬಹುದು.

ಚಾರುದತ್ತ—ಸಂತೋಷ ಸಂತೋಷ.

ವಿದೂಷಕ—ಎಲಾ, ಏಕಿಷ್ಟು ಸಾವಕಾಶಮಾಡಿದೆ ?

ವರ್ಧಮಾನಕ—ಅಯ್ಯಾ, ಕೋಪಮಾಡಬೇಡ. ರಥದಲ್ಲಿ ಹಾಸುವ ಹಾಸಿಗೆಯನ್ನು ಮರೆತು ಅದನ್ನು ತರುವುದಕ್ಕೆ ಹಿಂತಿರುಗಿ ಹೋಗಿ ಬಂದುದರಿಂದ ಹೊತ್ತಾಯಿತು.

ಚಾರುದತ್ತ—ವರ್ಧಮಾನಕನೆ, ರಥವನ್ನು ತಿರುಗಿಸು. (ವಿದೂಷಕನನ್ನು ಕುರಿತು) ಎಲೈ ಮೈತ್ರೇಯನೆ, ವಸಂತಸೇನೆಯನ್ನು ಮೆಲ್ಲಗೆ ರಥದಿಂದ ಇಳಿಸು.

ವಿದೂಷಕ—ಅವಳೇ ಇಳಿಯುವುದಕ್ಕೇನು? ಅವಳ ಕಾಲಿಗೆ ಸಂಕಲೆ ಹಾಕಿದೆಯೇ? (ರಥವನ್ನು ಹತ್ತಿ ಬಾಗಿಲು ತೆರೆದುನೋಡಿ) ಮಿತ್ರನೆ, ಇಲ್ಲಿರುವವಳು ವಸಂತಸೇನೆಯಲ್ಲ. ವಸಂತಸೇನನು!

ಚಾರುದತ್ತ—ಅಯ್ಯಾ, ಹಾಸ್ಯಮಾಡಬೇಡ. ಅದಕ್ಕೂ ಸಮಯಾ ಸಮಯಗಳಿಲ್ಲವೆ? ಒಳ್ಳೆಯದಾಯಿತು. ನಾನೇ ಇಳಿಸುವೆನು. (ರಥವನ್ನು ಹತ್ತಿ ನೋಡಿ ಸ್ವಗತ) ಓಹೋ, ಈ ಮಹಾತ್ಮನಾರು? ಈತನಲ್ಲಿ ರಾಜ ಲಕ್ಷಣಗಳೇ ಕಾಣುವುವು. ಇಂತಹನ ಕಾಲಿಗೆ ಸಂಕಲೆ ಹೇಗೆ ಬಂದಿತೋ? (ಪ್ರಕಾಶ) ಅಯ್ಯಾ, ನೀನು ಯಾರು?

ಆರ್ಯಕ—(ಸ್ವಗತ) ಇವನೇ ರಥಕ್ಕೆ ಯಜಮಾನನಾದ ಸತ್ಯ ವಂತನಾದ ಆರ್ಯ ಚಾರುದತ್ತನಿರಬಹುದು. ಇವನನ್ನು ಮರೆಹೊಗುವೆನು. (ಪ್ರಕಾಶ) ಆರ್ಯನೆ, ನಾನು ಆರ್ಯಕನೆಂಬ ಗೋಪಾಲಕನು. ನಿನಗೆ ಶರಣಾಗತನಾಗಿರುವೆನು. (ಎಂದು ಕಾಲಿಗೆ ಬಿದ್ದು)

ರಾಗ ॥

ಶರಣಾಗತನಾದೆನು । ಕರುಣಿಸೆನ್ನನು ।
ಧರೆಯೊಳಿನ್ನುಜೀವಿಪ । ಪರಿಯಕಾಣೆನು ॥ ೧ ॥
ಪಾಲಕನ ಬಾಧೆಯು । ಪರಿಹರಿಸುತ ।
ಪಾಲಿಸುವ ಸತ್ಕೃಪಾ । ಶಾಲಿ ನೀನೆಂದು ॥ ೨ ॥
ಮಾನವೇಂದ್ರನಿಂದೆನಗೀ । ಹಾನಿಯಾದುದು ।
ದೀನರನ್ನು ಸಲಹುವಭಿ । ಮಾನಿನೀನೆಂದು ॥ ೩ ॥

ಚಾರುದತ್ತ—ಪಾಲಕಮಹಾರಾಜನು ಹಳ್ಳಿಯಿಂದ ಹಿಡಿತರಿಸಿ, ಸೆರೆ ಯಲ್ಲಿಟ್ಟಿದ್ದುದು ನಿನ್ನನ್ನೆಯೋ?

ಆರ್ಯಕ—ಅಹುದು.

ಚಾರುದತ್ತ—ದೈವವೇ ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದಿತು. ನಾನು ನನ್ನ ಪ್ರಾಣಗಳನ್ನಾದರೂ ಕೊಡುವೆನೇ ಹೊರತು ಶರಣಾಗತನಾದ ನಿನ್ನನ್ನು ರಕ್ಷಿಸದೆ ಬಿಡುವುದಿಲ್ಲ. ಅಯ್ಯಾ, ವರ್ಧಮಾನಕನೆ, ಈತನ ಕಾಲಿನಲ್ಲಿರುವ ಸಂಕಲೆಯನ್ನು ತೆಗೆ.

ವರ್ಧಮಾನಕ—ಅಪ್ಪಣೆಯ ಪ್ರಕಾರ. (ಎಂದು ಸಂಕಲೆಯನ್ನು ತೆಗೆಯುವನು.)

ಆರ್ಯಕ—ಅಯ್ಯಾ, ಈ ಸಂಕಲೆಯಿಂದ ನಾನು ಮುಕ್ತನಾದರೂ ನಿನ್ನ ಸ್ನೇಹದಿಂದ ದೃಢವಾಗಿ ಬದ್ಧನಾದೆನು. ಆದರೆ ಈ ರಥವನ್ನು ಹತ್ತಿ ಬಂದುದಕ್ಕೆ ನೀನು ಕ್ಷಮಿಸಬೇಕು. ಅಪ್ಪಣೆಯಾದರೆ ಬರುವೆನು.

ಚಾರುದತ್ತ—ಮಿತ್ರನೇ, ಒಳ್ಳೆಯದು. ಈ ರಥದಲ್ಲಿ ಕುಳಿತುಕೊಂಡು ಹೋಗು. ಏಕೆಂದರೆ, ಇಷ್ಟುದಿನದವರೆಗೂ ನಿನ್ನ ಕಾಲಿನಲ್ಲಿ ಸಂಕಲೆಯಿದ್ದಿತು. ಅದನ್ನು ಈಗತಾನೇ ಕಳೆದಿದೆ. ಆದಕಾರಣ ನಿನ್ನಿಂದ ಜಾಗ್ರತೆಯಾಗಿ ನಡೆದುಕೊಂಡು ಹೋಗುವುದಕ್ಕಾಗುವುದಿಲ್ಲ. ಇಂತಹ ನಿನ್ನನ್ನು ಕಂಡು ರಾಜದೂತರು ಹಿಡಿದುಕೊಂಡಾರು. ಈ ರಥದಲ್ಲಿಯೇ ಕುಳಿತುಕೊಂಡು ಹೋಗು.

ಆರ್ಯಕ—ಹಾಗೆಯೇ ಆಗಲಿ.

ಚಾರುದತ್ತ—ಅಯ್ಯಾ, ನೀನು ಇನ್ನು ಸುಖವಾಗಿ ನಿನ್ನ ಬಂಧುಗಳ ಸಮೀಪಕ್ಕೆ ಹೊರಡಬಹುದು.

ಆರ್ಯಕ—ಅಯ್ಯಾ, ನನಗೆ ನೀನೇ ಬಂಧುವಲ್ಲವೆ ?

ಚಾರುದತ್ತ—ಸಮಯಬಂದಾಗ ನಿನಗೆ ನನ್ನ ಜ್ಞಾಪಕವಿರಲಿ.

ಆರ್ಯಕ—ಅಯ್ಯಾ, ನಾನು ನಿನ್ನನ್ನು ಮರೆತೇನೇ ?

ಚಾರುದತ್ತ—ದಾರಿಯಲ್ಲಿ ಹೋಗುವಾಗ ನಿನ್ನನ್ನು ದೇವತೆಗಳು ಸಂರಕ್ಷಣೆಮಾಡಲಿ. ಪಾಲಕಮಹಾರಾಜನು ಚಾರರನ್ನು ಕಳುಹಿಸಿ ನಿನ್ನನ್ನು ಅಲ್ಲಲ್ಲಿ ಹುಡುಕಿಸುತ್ತಿರುವನು. ಆದುದರಿಂದ ಜಾಗ್ರತೆಯಾಗಿ ಹೊರಟುಹೋಗು.

ಆರ್ಯಕ—ಹಾಗೆಯೇ ಆಗಲಿ, ಮತ್ತೆ ನಿನ್ನನ್ನು ಕಾಣುವೆನು. (ಎಂದು ಹೋಗುವನು).

ಚಾರುದತ್ತ—ಮೈತ್ರೇಯನೆ, ಪಾಲಕಮಹಾರಾಜನಿಗೆ ಅಹಿತವನ್ನು ಮಾಡಿ ನಾವಿಲ್ಲಿರುವುದು ಸರಿಯಲ್ಲ. ಈ ಸಂಕಲೆಯನ್ನು ಯಾರಾದರೂ ನೋಡಿಯಾರು ? ಆದುದರಿಂದ ಇದನ್ನು ಬೇಗ ಹಾಳುಭಾವಿಗೆ

ಹಾಕು. ವಸಂತಸೇನೆಯನ್ನು ನೋಡಬೇಕೆಂಬ ಕುತೂಹಲವು ನನಗೆ ಬಹಳವಾಗಿರುವುದು. ಎಡಗಣ್ಣಾದರೋ ಸುಮ್ಮನೆ ಚಲಿಸುತ್ತೆ. ನನ್ನ ಮನಸ್ಸಿಗೆ ಏನೋ ಭಯವನ್ನುಂಟುಮಾಡುತ್ತಿರುವುದು. ಆದುದರಿಂದ ಹೊರಟುಹೋಗೋಣ ನಡೆ. (ಮುಂದೆ ನೋಡಿ) ಇದೇನು ? ಹೊರಡು ವಾಗಲೇ ಜೈನಸನ್ಯಾಸಿ ಇದಿರಾಗಿ ಬರುತ್ತಿರುವನು. (ಎಂದು ಯೋಚಿಸಿ) ಬಂದರೆ ಬರಲಿ. ನಾವು ಹೊರಟುಹೋಗೋಣ. (ಎಂದಿಬ್ಬರೂ ಹೋಗು ವರು.)

ಇದು

ಆರ್ಯಕಾಪಹರಣವೆಂಬ ಏಳನೆಯಂಕಂ.

---

## ಎಂಟನೆಯಂಕಂ

---

(ಸ್ಥಾನ--ಉದ್ಯಾನ.)

ಭಿಕ್ಷು—(ಕಾವಿಯ ಬಟ್ಟೆಯೊಡನೆ ಪ್ರವೇಶಿಸಿ) ಅಯ್ಯಾ, ಧರ್ಮವನ್ನು ಸಂಪಾದಿಸಿ. ಈ ಶರೀರವು ಸ್ಥಿರವಾದುದಲ್ಲ. ಇಂದ್ರಿಯಗಳನ್ನು ನಿಗ್ರಹಿಸಿ, ಬುದ್ಧದೇವನನ್ನು ಸ್ಮರಿಸಿ.

ರಾಗ.

ಕೆಡಬೇಡರಿ ನೀವು। ಕಡುಮೋಹದೊಳು ಬಿದ್ದು। ಬಿಡದೆ ಬುದ್ಧನ ಭಜಿಸಿ॥ಪ॥
ತನುವೇಸ್ಥಿರವೆಂದು । ತಪ್ಪುಮಾತುಗಳಾಡಿ ।
ನಿಜಮನವನು । ನಿಗ್ರಹಿಸದೆ ಸುಮ್ಮನೆ ॥೧॥
ಸ್ಮರಬಾಧೆಗಳಿಗೆ । ಗುರಿಯಾಗುತೆ ಪೋಗಿ ।
ಪರತರುಣಿಯಭೋಗಕೆ । ಮರುಳಾಗುತ್ತ ॥ ೨ ॥
ಸಂಸಾರದೊಳಗದೇಂ । ಸಾರಮಿರ್ಪುದೊ ಕಾಣೆ ।
ಹಿಂಸೆಯಮಾಡುತ ನರಕವಸೇರಿ ॥ ೩ ॥

ಈ ಬಟ್ಟೆಗಳನ್ನು ಈಗತಾನೆ ಕಾವಿಯಲ್ಲಿ ನನೆಸಿರುವೆನು. ಇದನ್ನು ತೆಗೆದುಕೊಂಡು ಹೋಗಿ ರಾಜಶ್ಯಾಲಕನಾದ ಶಕಾರನ ಉದ್ಯಾನವನದೊಳಗಿರುವ ಸರೋವರದಲ್ಲಿ ಜಾಗ್ರತೆಯಾಗಿ ಒಗೆದುಕೊಂಡು ಬರುವೆನು. (ಎಂದು ಹೊರಡುವನು).

ತೆರೆಯಲ್ಲಿ—-ಎಲೋ, ನೀಚನಾದ ಜೈನಸನ್ಯಾಸಿಯೇ, ನಿಲ್ಲುನಿಲ್ಲು.

ಭಿಕ್ಷು--ಓಹೋ! ಇನ್ನೇನು ಗತಿ! ಶಕಾರನೇ ಬಂದನಲ್ಲಾ! ನಾನೊಬ್ಬ ಸನ್ಯಾಸಿ ಅಪರಾಧಮಾಡಿದೆನೆಂದು ತೋರಿದರೆ ಈ ಶಕಾರನು ಕಂಡಕಂಡ ಸನ್ಯಾಸಿಗಳಿಗೆಲ್ಲ ಶಿಕ್ಷೆಮಾಡದೆ ಬಿಡುವವನಲ್ಲ. ಆದುದರಿಂದ ಅನಾಥನಾದ ನಾನು ಈಗ ಯಾರನ್ನು ಮರೆಹೊಗಲಿ? ಅಥವಾ ನನ್ನ ಭಾಗದ ಬುದ್ಧದೇವನಂತಿರುವ ಈ ವಿಟನೇ ನನಗೆ ಸಂರಕ್ಷಕನು.

ಶಕಾರ—(ಖಡ್ಗಧಾರಿಯಾಗಿ ವಿಟನೊಡನೆ ಬಂದು) ಎಲೋ, ದುಸ್ಟನಾದ ಸನ್ಯಾಸಿಯೆ, ನಿಲ್ಲು ನಿಲ್ಲು. ಕೆಂಪು ಮೂಲಂಗಿಯನ್ನು ಕತ್ತರಿಸುವಂತೆ ನಿನ್ನ ತಲೆಯನ್ನು ಕತ್ತರಿಸುವೆನು. (ಹೊಡೆಯುವನು.)

ವಿಟ—ವೈರಾಗ್ಯದಿಂದ ಸನ್ಯಾಸವನ್ನು ತೆಗೆದುಕೊಂಡಿರುವ ಈತನನ್ನು ಹೀಗೆ ಹೊಡೆಯುವುದು ನಿನಗೆ ಯುಕ್ತವಲ್ಲ.

ಭಿಕ್ಷು—ಉಪಾಸಕನೆ, ಕೋಪಮಾಡಬೇಡ.

ಶಕಾರ--ಎಲೋ, ನೋಡುನೋಡು. ನನ್ನನ್ನು ಬಯ್ಯುವನು.

ವಿಟ--ಏನೆಂದು ಬಯ್ದನು ?

ಶಕಾರ--ಉಪಾಸಕನೆಂದು ಬಯ್ಯುತ್ತಾನೆ. ನಾನೇನು ಕ್ಷೌರಕನೆ ?

ವಿಟ--ಅಲ್ಲ, ಅಲ್ಲ. ನಿನ್ನನ್ನು ಬುದ್ಧದೇವನ ಉಪಾಸಕನೆಂದು ಸ್ತೋತ್ರಮಾಡುತ್ತಾನೆ.

ಶಕಾರ--ಇವನು ಇಲ್ಲಿಗೇಕೆ ಬಂದನು ?

ಭಿಕ್ಷು--ಈ ಕಾವಿಬಟ್ಟೆಯನ್ನು ಒಗೆಯುವುದಕ್ಕೋಸ್ಕರ ಬಂದೆನು.

ಶಕಾರ--ಎಲಾ, ದೊರೆ ಇರುವನಲ್ಲ! ನಮ್ಮ ಅಕ್ಕನ ಗಂಡ ! ಅವನು ಎಲ್ಲಾ ಉದ್ಯಾನವನಗಳಿಗಿಂತಲೂ ಒಳ್ಳೆಯದೆಂದು ಇದನ್ನು ನನಗೆ ಕೊಟ್ಟಿರುವನು. ಈ ಕೊಳದಲ್ಲಿ ನಾಯಿನರಿಗಳು ನೀರು ಕುಡಿಯುವುವೇ ಹೊರತು, ನಾನು—ಮನುಷ್ಯ--ಬಲು ಗಟ್ಟಿಗ--ನಾನು ಕೂಡ ಇಲ್ಲಿ ಸ್ನಾನಮಾಡುವುದಿಲ್ಲ. ಹೀಗಿರುವಾಗ ಈ ಹಾಳು ಕೊಳಕು ಬಟ್ಟೆಯನ್ನು ತಂದು ಇಲ್ಲಿ ಒಗೆಯುವೆಯಾ ? ಸರಿಯಾಗಿ ನಿಂತುಕೊ. ಒಂದೇಟು ಹೊಡೆಯುವೆನು.

ವಿಟ--ಬಿಟ್ಟುಬಿಡು ಪಾಪ ! ಏನೋ ಹೊಸದಾಗಿ ಸನ್ಯಾಸ ತೆಗೆದುಕೊಂಡಿರಬಹುದು.

ಭಿಕ್ಷು--ಆರ್ಯ, ಅಹುದು. ನಾನು ಮೊನ್ನೆತಾನೇ ಸನ್ಯಾಸವನ್ನು ಸ್ವೀಕರಿಸಿದೆನು.

ಶಕಾರ—ಇನ್ನೂ ಹುಡುಗನಾಗಿದ್ದು ಈಗಾಗಲೇ ಸನ್ಯಾಸವನ್ನೇಕೆ ತೆಗೆದುಕೊಂಡೆ ? (ಹೊಡೆಯುವನು.)

ಭಿಕ್ಷು--ಬುದ್ಧೇಶ! ಬುದ್ಧೇಶ! (ಎಂದು ಕೂಗಿಕೊಳ್ಳುವನು.)

ವಿಟ--ಇವನನ್ನೇಕೆ ಹೊಡೆಯುವೆ! ಅಯ್ಯೋ ಪಾಪ, ಬಿಟ್ಟು ಬಿಡು, ಹೋಗಲಿ.

ಶಕಾರ--ಎಲೋ, ನಾನು ಯೋಚಿಸುವವರೆಗೂ ಇಲ್ಲಿಯೇ ಇರು.

ವಿಟ--ಯಾರಸಂಗಡ ಯೋಚಿಸುವೆ?

ಶಕಾರ--ನನ್ನ ಮನಸ್ಸಿನ ಸಂಗಡ.

ವಿಟ--ಹಾಗಾದರೆ ಯೋಚಿಸು.

ಶಕಾರ--ಎಲೈ ಮನಸ್ಸೇ, ಈ ಜೈನಸನ್ಯಾಸಿಯು ಇರಲೋ? ಹೊರಟುಹೋಗಲೋ?

ವಿಟ--ನಿನ್ನ ಮನಸ್ಸು ಏನು ಹೇಳಿತು?

ಶಕಾರ—ಹೇಳುವುದೇನು? ಇರಲೂ ಬೇಡ. ಹೋಗಲೂ ಬೇಡ. ಸಾಯಲೂ ಬೇಡ. ಬದುಕಲೂ ಬೇಡ. ಈ ನೆಲದಮೇಲೆ ಬಿದ್ದು ಹೊರಳಿ ಜಾಗ್ರತೆಯಾಗಿ ಪ್ರಾಣವನ್ನು ಬಿಡಲಿ-ಎಂದು ಹೇಳಿತು.

ಭಿಕ್ಷು--ಅಯ್ಯಾ, ಶರಣಾಗತನಾಗಿರುವೆನು.

ವಿಟ--ಅಯ್ಯೋ ಪಾಪ! ಹೋಗಲಿ ಬಿಡು.

ಶಕಾರ--ಹಾಗಾದರೆ ನಾನು ಹೇಳಿದಂತೆ ಮಾಡಿಬಿಟ್ಟು ಹೋಗಲಿ.

ವಿಟ—ನೀನು ಹೇಳುವುದೇನು?

ಶಕಾರ—ಕದಲದಂತೆ ನೀರನ್ನೆಲ್ಲಾ ಗುಡ್ಡೆಮಾಡಿ, ಕೆಸರನ್ನು ಎತ್ತಿಹಾಕಲಿ. ಇಲ್ಲದಿದ್ದರೆ ಕೆಸರನ್ನು ಗುಡ್ಡೆಮಾಡಿ, ನೀರನ್ನು ಎತ್ತಿ ಹಾಕಲಿ.

ವಿಟ—(ಸ್ವಗತ) ಆಹ! ಏನು ಬುದ್ಧಿಶಾಲಿ! ಇಂತಹ ಮೂರ್ಖರಿಂದಲೇ ಭೂಮಿಗೆ ಬಹಳ ಭಾರವಾಗಿರುವುದು. (ಪ್ರಕಾಶ) ಒಳ್ಳೆಯದು. ಸನ್ಯಾಸಿಯೆ, ಹೊರಟುಹೋಗು.

ಭಿಕ್ಷು—ಈಗ ನಾನು ಬದುಕಿದೆನು. (ಎಂದು ಹೋಗುವನು.)

ವಿಟ—ಅಯ್ಯಾ, ಈ ಕಲ್ಲಿನಮೇಲೆ ಕುಳಿತುಕೊ.

ಶಕಾರ—(ವಿಟನೊಡನೆ ಕುಳಿತುಕೊಂಡು) ಇನ್ನೂ ನನ್ನ ಮನಸ್ಸು ಆ ವಸಂತಸೇನೆಯನ್ನೇ ಸ್ಮರಿಸುತ್ತಿರುವುದು,

ವಿಟ—(ಸ್ವಗತ) ಅಷ್ಟು ತಿರಸ್ಕರಿಸಿದರೂ ಇನ್ನೂ ಅವಳನ್ನೇ ಸ್ಮರಿಸುವನಲ್ಲಾ !

ಶಕಾರ—ಜಾಗ್ರತೆಯಾಗಿ ರಥವನ್ನು ತೆಗೆದುಕೊಂಡು ಬಾರೆಂದು ಸ್ಥಾವರಕನಿಗೆ ಹೇಳಿ ಬಂದೆನು. ಮಧ್ಯಾಹ್ನವಾಗುತ್ತ ಬಂದಿತು. ಇನ್ನೂ ಬರಲಿಲ್ಲ. ಬಿಸಿಲಲ್ಲಿ ನಡೆದುಕೊಂಡು ಹೋಗುವುದಕ್ಕೂ ಆಗುವುದಿಲ್ಲ. ಹೊಟ್ಟೆ ಬೇರೆ ಹಸಿಯುತ್ತಿರುವುದು. ಈಗೇನುಮಾಡಲಿ? ಸ್ವಲ್ಪ ಗಾನವನ್ನಾದರೂ ಮಾಡುವೆನು.

ರಾಗ.

ನೋಡೋ ತಲೆಮೇಲೆ ಸೂರ್ಯ ನಿಂತಿಹ ಬೆಂಕಿಹಾಗೇ ‖ ಪ‖
ಕಾಡುತೀಬಿಸಿಲಿಂದ ಕಾಡಿನೊಳ್ ಕೋಪಗೊಂಡ ।
ಕೋತಿಯಂತೆ ಕಾಣುವ ‖ ೧ ‖
ಹಕ್ಕಿಗಳ್ ಮರಗಳ್ಗೆ ಹಾರುತಲೊಂದೊಂದಾಗಿ ।
ಸೊಕ್ಕಿಸೊಕ್ಕಿ ಬೀಳ್ವವು ಹಾ ‖ ೨ ‖

ಅಯ್ಯಾ, ನಾನು ಹಾಡಿದುದನ್ನು ಕೇಳಿದೆಯೋ ?

ವಿಟ—ಕೇಳುವುದೇನು, ನೀನು ಗಂಧರ್ವನಲ್ಲವೇ ?

ಶಕಾರ—ಎಷ್ಟೋ ಕೋಗಿಲೆಗಳನ್ನು ಕೊಂದಿರುವ ನಾನು ಗಂಧರ್ವನಲ್ಲವೆ ? (ರಥದ ಶಬ್ದವನ್ನು ಕೇಳಿ) ಅಯ್ಯಾ, ರಥ ಬಂದಿತು.

ವಿಟ—ಅದನ್ನು ಹೇಗೆ ತಿಳಿದೆ ?

ಶಕಾರ—ಮುದಿಹಂದಿಯಂತೆ ಘುರಘುರನೆ ಶಬ್ದಮಾಡುತ್ತಾ ಬರುತ್ತಿರುವುದು. ನೋಡು.

(ಸ್ಥಾವರಕನ ಪ್ರವೇಶ).

ವಿಟ—ಅಹುದಯ್ಯಾ, ಬಂದಿತು.

ಶಕಾರ—ಅಯ್ಯಾ, ಮಗನೆ, ಸ್ಥಾವರಕನೆ, ಬಂದೆಯಾ ?

ಸ್ಥಾವರಕ—ಬಂದೆನು.

ಶಕಾರ—ರಥವೂ ಬಂದಿತೊ ?

ಸ್ಥಾವರಕ—ಬಂದಿತು.

ಶಕಾರ—ಎತ್ತುಗಳೂ ಬಂದುವೊ ?

ಸ್ಥಾವರಕ—ಬಂದುವು.

ಶಕಾರ—ನೀನೂ ಬಂದೆಯೋ ?

ಸ್ಥಾವರಕ—(ನಗುತ್ತಾ) ನಾನೂ ಬಂದೆನು.

ಶಕಾರ—ಆದರೆ ರಥವನ್ನು ಒಳಕ್ಕೆ ಬಿಡು.

ಸ್ಥಾವರಕ—ಯಾವದಾರಿಯಿಂದ ಬಿಡಲಿ ?

ಶಕಾರ—ಈ ಗೋಡೆಯ ಮೇಲೆ ಬಿಡು.

ಸ್ಥಾವರಕ—ಹಾಗಾದರೆ ಎತ್ತುಗಳು ಸತ್ತುಹೋಗುವುವು. ರಥವು ಮುರಿದು ನಾನೂ ಸಾಯುವೆನು.

ಶಕಾರ—ಎಲೋ, ನಾನು ಧೊರೆಯ ಭಾವಮೈದುನ. ಎತ್ತುಗಳು ಸತ್ತುಹೋದರೆ ಬೇರೆ ಎತ್ತುಗಳನ್ನು ಕ್ರಯಕ್ಕೆ ತರಿಸುವೆನು. ರಥವು ಮುರಿದುಹೋದರೆ ಇನ್ನೊಂದು ರಥವನ್ನು ಮಾಡಿಸುವೆನು. ನೀನು ಸತ್ತುಹೋದರೆ ಮತ್ತೊಬ್ಬನನ್ನು ಇರಿಸಿಕೊಳ್ಳುವೆನು.

ಸ್ಥಾವರಕ—ಎಲ್ಲವೂ ಆಗಬಹುದು. ನಾನು ಮಾತ್ರ ನಿಮ್ಮವನಾಗಿರುವುದಕ್ಕಿಲ್ಲದೆ ಹೋಗುವೆನು.

ಶಕಾರ—ಹಾಗಾದರೆ ನಿನಗೆ ತೋರಿದಂತೆ ಮಾಡು.

ಸ್ಥಾವರಕ—(ರಥವನ್ನು ಬಿಟ್ಟುಕೊಂಡು ಬಂದು) ಅಯ್ಯಾ, ರಥ ಬಂದಿತು.

ಶಕಾರ—ಅಯ್ಯಾ, ನೀನು ನನಗೆ ಗುರು. ಪರಮಗುರು. ಬೇಕಾದರೆ ನೀನೇ ರಥವನ್ನು ಮೊದಲು ಹತ್ತು.

ವಿಟ—ಹಾಗೆಯೇ ಆಗಲಿ. (ಹತ್ತಲು ಯತ್ನಿಸುವನು.)

ಶಕಾರ—ಎಲೋ, ಬೇಡ ಬೇಡ. ರಥವು ನಿಮ್ಮಪ್ಪನ ಮನೆಯದೋ ? ಈ ರಥಕ್ಕೆ ಯಜಮಾನನು ನಾನು, ನಾನು ಮುಂಚೆ ಹತ್ತಬೇಕು.

ವಿಟ—ಮತ್ತೆ ನನ್ನನ್ನೇಕೆ ಮೊದಲು ಹತ್ತು, ಎಂದೆ ?

ಶಕಾರ—ಅಹುದು ಹೇಳಿದೆನು. ಆದರೆ ನೀನು "ಸ್ವಾಮಿ, ಯಜಮಾನರೆ, ನೀವೇ ಮುಂಚೆ ಹತ್ತಿ" ಎಂದು ಹೇಳಬೇಕು.

ವಿಟ—(ನಕ್ಕು, ಸ್ವಗತ) ಇಂತಹವರ ಸಹವಾಸವು ಬಹು ಕಷ್ಟ. (ಪ್ರಕಾಶ) ಹಾಗೆಯೇ ಆಗಲಿ, ನೀನೇ ಹತ್ತು.

ಶಕಾರ—ಎಲೋ, ಸ್ಥಾವರಕನೆ, ರಥವನ್ನು ತಿರುಗಿಸು.

ಸ್ಥಾವರಕ—(ತಿರುಗಿಸಿ) ಅಯ್ಯಾ, ಇನ್ನು ಹತ್ತಬಹುದು.

ಶಕಾರ—(ಹತ್ತಿನೋಡಿ, ಭೀತನಾಗಿ ಓಡಿಬಂದು, ವಿಟನ ಕತ್ತಿನ ಮೇಲೆ ಕೈಹಾಕಿಕೊಂಡು) ಅಯ್ಯಾ, ನೀನು ಸತ್ತುಹೋಗುತ್ತೀಯೆ! ನಾನೂ ಸತ್ತುಹೋಗುತ್ತೇನೆ! ರಥದಲ್ಲಿ ರಾಕ್ಷಸಿಯೋ ಚೋರನೋ ಯಾರೋ ಇರುವರು.

ವಿಟ—ಹೆದರಬೇಡ ಹೆದರಬೇಡ. ಎತ್ತುಗಳನ್ನು ಕಟ್ಟಿರುವ ಈ ರಥದಲ್ಲಿ ರಾಕ್ಷಸಿ ಎಲ್ಲಿಂದ ಬಂದಾಳು. ಈಗ ಬಿಸಿಲ ಜಳದಿಂದ ನಿನಗೆ ಚೆನ್ನಾಗಿ ಕಾಣಲಿಲ್ಲ. ಸ್ಥಾವರಕನ ನೆಳಲನ್ನು ನೋಡಿ ನೀನು ಹೀಗೆ ತಿಳಿದುಕೊಂಡೆಯೋ ಏನೋ?

ಶಕಾರ—ಅಯ್ಯಾ, ಇಲ್ಲಿ ಯಾವಳೋ ಸ್ತ್ರೀಯು ಇರುವಳು. ನೀನೇ ನೋಡು.

ವಸಂತಸೇನೆ—ಅಯ್ಯೋ! ಮೋಸಹೋದೆನು. ಇದೇನು! ನನಗೆ ವ್ಯಥೆಯನ್ನುಂಟುಮಾಡಿದ ಶಕಾರನು ಇಲ್ಲೇ ಇರುವನಲ್ಲಾ. ಇದರಿಂದ ನನ್ನ ಮನಸ್ಸಿಗೇನೋ ಭಯವುಂಟಾಗುವುದು. ನಿರ್ಭಾಗ್ಯಳಾದ ನಾನು ಇಲ್ಲಿಗೆ ಬಂದುದು ಊಷರಭೂಮಿಯಲ್ಲಿ ಬಿತ್ತಿದ ಬೀಜದಂತೆ ನಿಷ್ಫಲ ವಾಯಿತು. ಈಗ ಏನುತಾನೆ ಮಾಡಲಿ? ಯಾರನ್ನು ಮರೆಹೋಗಲಿ?

ವಿಟ—ಆಗಲಿ, ಅದಕ್ಕೇನು? (ನೋಡುವನು.)

ಶಕಾರ—ನನಗಂತೂ ಭಯವಾಗುವುದು. ನಿನ್ನನ್ನು ಹಲ್ಲುಗಳಿಂದ ನೋಡಿ ಕಣ್ಣುಗಳಿಂದ ಕಿತ್ತುಕೊಂಡು ತಿನ್ನುವಷ್ಟರಲ್ಲಿಯೇ ನಾನು ಓಡಿ ಹೋಗುವೆನು.

ವಿಟ—(ರಥವನ್ನು ಹತ್ತಿ, ವಸಂತಸೇನೆಯನ್ನು ನೋಡಿ, ವಿಷಾದ ಯುಕ್ತನಾಗಿ, ಸ್ವಗತ) ಅಯ್ಯೋ ಕಷ್ಟ. ಈಕೆಯು ಈ ಶಕಾರನ ಸಮೀಪಕ್ಕೆ ಬಂದುದು ಹಂಸೆಯು ರಾಜಹಂಸನನ್ನು ಬಿಟ್ಟು ಕಾಗೆಯ ಸಮೀಪಕ್ಕೆ ಬಂದಹಾಗಾಯಿತಲ್ಲಾ! (ಮರೆಯಲ್ಲಿ) ವಸಂತಸೇನೆಯೇ,

ನಿನಗಿದು ಯುಕ್ತವಲ್ಲ. ಪೂರ್ವದಲ್ಲಿ ದ್ರವ್ಯಕ್ಕೆ ಆಸೆಪಟ್ಟು, ನಿಮ್ಮ ತಾಯಿ, ಶಕಾರನನ್ನು ವರಿಸೆಂದು ನಿನಗೆ ಹೇಳಿದುದಕ್ಕೆ ಮಾನದಮೇಲೆ ದೃಷ್ಟಿಯಿಟ್ಟು ಆಗ ತಿರಸ್ಕರಿಸಿ ಈಗ ಇವನನ್ನೇ ಹುಡುಕಿಕೊಂಡು ಬರಬಹುದೇ ?

ವಸಂತಸೇನೆ—ರಥವು ನನ್ನದೆಂದು ಭ್ರಮಿಸಿ ಹೀಗೆ ಬಂದೆನು. ಶರಣಾಗತೆಯಾಗಿರುವೆನು. ಕಾಪಾಡಬೇಕು.

ವಿಟ—ಭಯಪಡಬೇಡ ಭಯಪಡಬೇಡ. ಹೇಗಾದರೂ ಅವನಿಗೆ ಮೋಸಮಾಡಿ, ನಿನ್ನನ್ನು ರಕ್ಷಿಸುವೆನು. (ಶಕಾರನ ಸಮೀಪಕ್ಕೆ ಬಂದು) ಅಯ್ಯಾ, ನಿಶ್ಚಯವಾಗಿಯೂ ರಥದಲ್ಲಿ ರಾಕ್ಷಸಿಯೇ ಇರುವಳು.

ಶಕಾರ—ರಾಕ್ಷಸಿಯೇ ಆಗಿದ್ದರೆ ನಿನ್ನನ್ನು ಏಕೆ ಕದಿಯಲಿಲ್ಲ ? ಅಥವಾ ಕಳ್ಳನಾಗಿದ್ದರೆ ನಿನ್ನನ್ನು ಏಕೆ ಕೊಲ್ಲಲಿಲ್ಲ ?

ವಿಟ—(ಸ್ವಗತ) ಬಹಳ ಬುದ್ಧಿವಂತ, ಎಷ್ಟು ಚೆನ್ನಾಗಿ ಮಾತನಾಡುವನು ! (ಪ್ರಕಾಶ) ಹೇಗಾದರೂ ಆಗಲಿ. ಅಷ್ಟು ಪರೀಕ್ಷೆಯೇಕೆ ? ನಡೆದುಕೊಂಡೇ ಹೊರಟುಹೋಗೋಣ.

ಶಕಾರ—ಏಕೆ ನಡೆದುಕೊಂಡು ಹೋಗಬೇಕು ?

ವಿಟ—ಏಕೆ ? ಎತ್ತುಗಳಿಗೆ ಆಯಾಸ ಕಡಮೆಯಾಗುವುದು. ನಮಗೂ ಕಾಲುಗಳಿಗೆ ಬಲವುಂಟಾಗುವುದು.

ಶಕಾರ—ಹಾಗೆಯೇ ಆಗಲಿ. ಎಲೋ, ಸ್ಥಾವರಕ, ರಥವನ್ನು ತೆಗೆದುಕೊಂಡು ಹೋಗು. ಬೇಡ ಬೇಡ, ದೊಡ್ಡವರಿದಿರಾಗಿ ನಾನು ನಡೆದುಕೊಂಡು ಹೋಗುವ ಸಂಪ್ರದಾಯವಿಲ್ಲ. ನಾನು ರಥದಮೇಲೆ ಹತ್ತಿ ಹೋಗುತ್ತಿರಬೇಕು. ಅವರೆಲ್ಲರೂ ನನ್ನನ್ನು ನೋಡಿ ರಾಜಶ್ಯಾಲಕ ಬಂದನು—ಎಂದು ನನಗೆ ಮರ್ಯಾದೆಮಾಡಬೇಕು. ಇದು ನನ್ನ ಪದ್ಧತಿಯಾದುದರಿಂದ ರಥವನ್ನು ನಿಲ್ಲಿಸು.

ವಿಟ—(ಸ್ವಗತ) ಈ ಮೂರ್ಖನನ್ನು ಒಪ್ಪಿಸುವುದು ಬಹು ಕಷ್ಟ. (ಪ್ರಕಾಶ) ವಸಂತಸೇನೆಯು ನಿನ್ನಲ್ಲಿ ಅನುರಕ್ತೆಯಾಗಿ ಬಂದಿರುವಳು.

ವಸಂತಸೇನೆ—ಶಿವಶಿವ ! (ಕಿವಿಗಳನ್ನು ಮುಚ್ಚಿಕೊಳ್ಳುವಳು).

ಶಕಾರ—ಏನು ! ದೊಡ್ಡಮನುಷ್ಯನಾದ ನನ್ನಲ್ಲಿಯೋ ?

ವಿಟ—ಅಹುದು.

ಶಕಾರ—ಚಾರುದತ್ತನ ಮನೆಗೆ ಹೋಗುವಾಗ ಆ ವಸಂತಸೇನೆಗೆ ಕೋಪ ಬರುವಹಾಗೆ ಮಾಡಿದ್ದೆನು. ಈಗ ಹೋಗಿ ಅವಳ ಕಾಲಿಗೆ ಅಡ್ಡ ಬಿದ್ದು ಅವಳನ್ನು ಸಮಾಧಾನಪಡಿಸುವೆನು.

ವಿಟ—ಸರಿಸರಿ, ಹಾಗೆಯೇ ಮಾಡು.

ಶಕಾರ—(ವಸಂತಸೇನೆಯ ಸಮೀಪಕ್ಕೆ ಹೋಗಿ) ನಮ್ಮಮ್ಮಾ; ತಾಯೆ, ನನ್ನ ವಿಜ್ಞಾಪನೆಯನ್ನು ಕೇಳು; ಪೂರ್ವದಲ್ಲಿ ನಾನು ನಿನಗೆ ಅನೇಕಾಪರಾಧಗಳನ್ನು ಮಾಡಿದ್ದೆನು. ಅದನ್ನು ಕ್ಷಮಿಸಿ ದಾಸನಾದ ನನ್ನಲ್ಲಿ ಅನುಗ್ರಹಮಾಡು. (ನಮಸ್ಕರಿಸುವನು.)

ವಸಂತಸೇನೆ—ಚೀ! ದೂರ ಹೋಗು, ಕೆಟ್ಟಮಾತನ್ನಾಡಬೇಡ. (ಒದೆಯುವಳು.)

ಶಕಾರ—(ಕೋಪದಿಂದ) ದೇವರಿಗೂ ಕೂಡ ನಮಸ್ಕರಿಸದೆ ಇರುವ ನಾನು, ನಮಸ್ಕರಿಸಿದರೆ ಇವಳು ನನ್ನನ್ನು ಒದೆದಳಲ್ಲ! ಎಲೋ, ಸ್ಥಾವರಕ, ಇವಳು ನಿನಗೆಲ್ಲಿ ಸಿಕ್ಕಿದಳು?

ಸ್ಥಾವರಕ—ಅಯ್ಯಾ, ನಾನು ಬರುವಾಗ ರಾಜಮಾರ್ಗದಲ್ಲಿ ಅವಕಾಶವಿಲ್ಲದಂತೆ ಬಂಡಿಗಳು ನಿಂತಿದ್ದುವು. ಆಗ ಚಾರುದತ್ತನ ಮನೆ ಬಾಗಿಲಲ್ಲಿ ರಥವನ್ನು ನಿಲ್ಲಿಸಿ, ಮುಂದೆ ಬಂಡಿಯ ಚಕ್ರವನ್ನು ತಳ್ಳಿ ಬರುವಷ್ಟರಲ್ಲಿಯೇ, ಇವಳು ಇದನ್ನು ತನ್ನ ರಥವೆಂದು ತಿಳಿದು ಕುಳಿತು ಕೊಂಡಿರಬಹುದು.

ಶಕಾರ—ಓಹೋ! ಅದರಿಂದಲೋ ಇವಳು ಬಂದುದು? ನನಗೋಸ್ಕರವಲ್ಲ. (ವಸಂತಸೇನೆಯನ್ನು ಕುರಿತು) ಎಲೆ ದಾಸಿ, ಬಂಡಿಯನ್ನು ಬಿಟ್ಟಿಳಿ. ಆ ದರಿದ್ರ ಚಾರುದತ್ತನನ್ನು ಹುಡುಕಿಕೊಂಡು ಬರುತ್ತಾ, ನನ್ನ ಎತ್ತುಗಳಿಗೆ ಆಯಾಸಮಾಡಿದೆಯಾ? ಇಳಿ, ಮೊದಲು ಇಳಿ.

ವಸಂತಸೇನೆ—(ಸ್ವಗತ) ಆರ್ಯ ಚಾರುದತ್ತನನ್ನು ಹುಡುಕಿಕೊಂಡು ಬಂದೆ— ಎಂಬ ಮಾತಿನಿಂದ ನನಗೆ ಬಹಳ ಸಂತೋಷವಾಯಿತು. ಇನ್ನೇನಾದರೂ ಆಗಲಿ.

ಶಕಾರ—ಈಗ ನಿನ್ನ ಮುಂದಲೆಯನ್ನು ಹಿಡಿದು ಜಟಾಯುವು ವಾಲಿಯ ಹೆಂಡತಿಗೆ ಮಾಡಿದಂತೆ ಮಾಡುವೆನು. (ಮುಂದಲೆಯನ್ನು ಹಿಡಿಯುವನು.)

ವಿಟ—ಅಯ್ಯಾ, ಇಂತಹ ಗುಣಾಢ್ಯೆಯರಾದ ಸ್ತ್ರೀಯರನ್ನು ಮುಂದಲೆಹಿಡಿದು ಎಳೆಯಬಾರದು. ನೀನು ಸುಮ್ಮನಿರು ; ನಾನು ರಥದಿಂದಿಳಿಸುವೆನು. ವಸಂತಸೇನೆಯೇ, ಇಳಿ.

ವಸಂತಸೇನೆ—(ಇಳಿದು ಕುಳಿತುಕೊಳ್ಳುವಳು.)

ಶಕಾರ—(ಸ್ವಗತ) ಪೂರ್ವದಲ್ಲಿ ಇವಳು ನನಗವಮಾನ ಮಾಡಿದ ಕೋಪಾಗ್ನಿಯು ಹೊಗೆಯಾಡುತ್ತಿದ್ದಿತು. ಈಗ ನನ್ನನ್ನು ಒದೆದು ಅದನ್ನು ಉರಿಯುವಂತೆ ಮಾಡಿದಳು. ಆದುದರಿಂದ ಇವಳನ್ನು ಕೊಲ್ಲುವೆನು. (ಪ್ರಕಾಶ) ಅಯ್ಯಾ, ನಿನಗೆ ಬೇಕಾದುದನ್ನು ಕೊಡುವೆನು, ನನಗೋಸ್ಕರ ಒಂದು ಕಾರ್ಯವನ್ನು ಮಾಡು.

ವಿಟ—ಅದು ಅಕಾರ್ಯವಲ್ಲದಿದ್ದರೆ ಮಾಡುವೆನು.

ಶಕಾರ—ಅಕಾರ್ಯದ ಪ್ರಸ್ತಾಪವೇ ನನ್ನಲ್ಲಿಲ್ಲ.

ವಿಟ—ಆದರೆ ಹೇಳು.

ಶಕಾರ—ಈ ವಸಂತಸೇನೆಯನ್ನು ಕೊಲ್ಲು.

ವಿಟ—ಶಿವಶಿವ ! (ಕಿವಿಗಳನ್ನು ಮುಚ್ಚಿಕೊಂಡು) ಈ ಉಜ್ಜಯಿನೀ ಪಟ್ಟಣಕ್ಕೆಲ್ಲ ಅಲಂಕಾರಪ್ರಾಯಳಾಗಿಯೂ, ಸೂಳೆಯಾಗಿದ್ದರೂ ಸಚ್ಚರಿತ್ರೆಯಾಗಿಯೂ ಇರುವ ಈ ಸ್ತ್ರೀಯನ್ನು ಕೊಂದು, ನಾನು ಯಾವದಾರಿಯಿಂದ ಪರಲೋಕಕ್ಕೆ ಹೋಗಲಿ ?

ಶಕಾರ—ಎಲೋ, ಹುಚ್ಚ, ಪರಲೋಕವೆಂದರೇನು ? ನಿನಗೆ ಬೇಕಾಗಿದ್ದರೆ ಪರಲೋಕಕ್ಕೆ ಹೋಗುವ ದಾರಿಯನ್ನು ನಾನು ಬೇರೆ ಮಾಡಿಸಿಕೊಡುವೆನು. ಇಷ್ಟಕ್ಕೂ ಇಲ್ಲಿ ನೀನು ಕೊಂದರೆ ಯಾರುತಾನೆ ಕಾಣುವರು.

ವಿಟ—ಹಾಗೆನ್ನಬಹುದೆ? ದಶದಿಕ್ಕುಗಳೂ, ಸೂರ್ಯ ಚಂದ್ರರೂ, ವಸುರುದ್ರಾದಿ ದೇವತೆಗಳೂ, ಎಲ್ಲರೂ ನೋಡುವುದಿಲ್ಲವೆ ?

ಶಕಾರ—ಆದರೆ, ಬಟ್ಟೆಯಿಂದ ಮರೆಮಾಡಿಕೊಂಡು ಕೊಲ್ಲು.

ವಿಟ—ಮೂಢ, ನೀನು ಕೆಟ್ಟೆ.

ಶಕಾರ—ಈ ತಬ್ಬಲಿ--ಮುದಿಗೂಬೆ-ಅಧರ್ಮಕ್ಕೆ ಹೆದರುವನು. ಹೋಗಲಿ. ಸ್ಥಾವರಕನಿಗೆ ಹೇಳುವೆನು. ಸ್ಥಾವರಕ, ಇವಳನ್ನು ಕೊಲ್ಲು.

ಸ್ಥಾವರಕ—ಶಿವಶಿವ! ಅಯ್ಯಾ, ಕೋಪಮಾಡಬೇಡ. ನೀಚನಾದ ನಾನು ಇವಳು ಗಾಡಿಯಲ್ಲಿ ಕುಳಿತುದನ್ನು ನೋಡಲಿಲ್ಲ. ನೋಡಿದ್ದರೆ ಕರೆದುಕೊಂಡು ಬರುತ್ತಿರಲಿಲ್ಲ.

ಶಕಾರ—ನಾನು ನಿನಗೆ ಪ್ರಭುವಲ್ಲವೆ?

ಸ್ಥಾವರಕ—ಅಹುದು. ನೀನು ಶರೀರಕ್ಕೆ ಪ್ರಭುವೇ ಹೊರತು ಪುಣ್ಯಪಾಪಗಳಿಗಲ್ಲ. ಆದುದರಿಂದ ಕ್ಷಮಿಸು. ಇಂತಹ ಮಾತನ್ನು ಮಾತ್ರ ಹೇಳಬೇಡ. ನನಗೆ ಬಹಳ ಭಯವಾಗುವುದು.

ಶಕಾರ—ಎಲೋ, ನಾನು ಹೇಳಿದಹಾಗೆ ಕೇಳುವುದಿಲ್ಲವೆ? (ಹೊಡೆಯುವನು.)

ಸ್ಥಾವರಕ—ನೀನು ಇನ್ನೂ ಹೊಡೆ; ನನ್ನನ್ನು ಕೊಂದುಹಾಕು. ನಾನು ಬೇರೆ ಅಕಾರ್ಯವನ್ನು ಮಾಡುವುದಿಲ್ಲ. ಜನ್ಮಾಂತರದಲ್ಲಿ ಯಾವ ಪಾಪವನ್ನು ಮಾಡಿದ್ದೆನೋ ಅದರ ಫಲವಾಗಿ ಈಗ ನಿನಗೆ ದಾಸನಾಗಬೇಕಾಯಿತು. ಪುನಃ ಪಾಪಕೃತ್ಯವನ್ನು ಮಾಡಲೇ?

ಶಕಾರ—(ಸ್ವಗತ) ಈ ಮುದಿಗೂಬೆ ಅಧರ್ಮಕ್ಕೆ ಹೆದರುವನು. ಈ ಗರ್ಭದಾಸನು ಪುಣ್ಯಪಾಪಗಳಿಗೆ ಹೆದರುವನು. ರಾಜಶ್ಯಾಲಕನಾದ ನನಗೆ ಯಾರಭಯವೂ ಇಲ್ಲ. (ಪ್ರಕಾಶ) ಎಲೋ, ಸ್ಥಾವರಕ, ನೀನು ಹೋಗಿ ನೆಲಮಾಳಿಗೆಯಲ್ಲಿ ರಹಸ್ಯವಾಗಿ ವಿಶ್ರಮಿಸಿಕೊ. (ಸ್ಥಾವರಕನು ಹೋಗುವನು.)

ಶಕಾರ—ಎಲೆ ವಸಂತಸೇನೆ, ನಿಲ್ಲು ನಿಲ್ಲು, ನಿನ್ನನ್ನು ಕೊಲ್ಲುವೆನು. (ಕೊಲ್ಲುವುದಕ್ಕೆ ಹೋಗುವನು).

ವಿಟ—ಎಲೋ, ನನ್ನ ಮುಂದೆ ಕೊಲ್ಲುವೆಯಾ? (ಎಂದು ಹೊಡೆಯುವನು.)

ಶಕಾರ—(ನೆಲದಮೇಲೆ ಬಿದ್ದು) ಅಯ್ಯೋ, ನನ್ನನ್ನು ಕೊಲ್ಲುವೆಯಾ? (ಮೂರ್ಛಿತನಾಗಿ ಚೇತರಿಸಿಕೊಂಡು, ಸ್ವಗತ) ಇವನು

ನನ್ನಿಂದಲೇ ಪ್ರೋಷಿತನಾಗಿ ನನ್ನ ಕಾರ್ಯ ಬಂದಾಗ ನನಗೇ ವೈರಿಯಾದನಲ್ಲ! (ಯೋಚಿಸಿ) ಇರಲಿ, ಇದಕ್ಕೊಂದುಪಾಯಮಾಡುವೆನು. (ಪ್ರಕಾಶ) ನೀನು ಇಲ್ಲಿದ್ದರೆ ಇವಳು ನಾಚಿಕೆಯಿಂದ ನನ್ನನ್ನು ಅಂಗೀಕರಿಸುವುದಿಲ್ಲ. ಆದಕಾರಣ ಈಗ ಹೋಗಿ ನಾನು ಕಳುಹಿಸಿರುವ ಸ್ಥಾವರಕನನ್ನು ಕರೆದುಕೊಂಡು ಬಾ.

ವಿಟ—(ಸ್ವಗತ) ಈಕೆಯು ನಾನಿಲ್ಲಿರುವೆನೆಂದು ಈ ಮೂರ್ಖನ ಸಂಗಡ ಮಾತನಾಡುವುದಕ್ಕೆ ಸಂಕೋಚಪಡುವಳೋ ಏನೋ! (ಪ್ರಕಾಶ) ಹಾಗೆಯೇ ಆಗಲಿ. (ಹೊರಡುವನು.)

ವಸಂತಸೇನೆ—(ವಿಟನ ಸೆರಗನ್ನು ಹಿಡಿದು) ಅಯ್ಯಾ, ನಾನು ಶರಣಾಗತೆಯಾದೆನೆಂದು ಹೇಳಲಿಲ್ಲವೆ?

ವಿಟ—ವಸಂತಸೇನೆ, ಹೆದರಬೇಡ (ಶಕಾರನನ್ನು ಕುರಿತು) ಅಯ್ಯಾ, ಈ ವಸಂತಸೇನೆಯನ್ನು ನಿನ್ನ ಅಧೀನಕ್ಕೆ ಕೊಟ್ಟಿರುವೆನು. ಎಚ್ಚರಿಕೆ! ಪುನಃ ನಾನು ಕೇಳಿದಾಗ ನನ್ನ ವಶಕ್ಕೆ ಕೊಡಬೇಕು.

ಶಕಾರ—ಅದಕ್ಕೇನು? ಹಾಗೆಯೇ ಆಗಲಿ. ನೀನು ಕೇಳಿದಾಗ ಕೊಡುವೆನು.

ವಿಟ—ಈ ಮಾತು ನಿಶ್ಚಯವೋ?

ಶಕಾರ—ನಿಶ್ಚಯ.

ವಿಟ—(ಸ್ವಲ್ಪದೂರ ಹೋಗಿ) ನಾನು ಹೊರಟುಹೋದರೆ ಈ ನೀಚನು ಇವಳನ್ನು ಕೊಂದುಬಿಟ್ಟಾನೋ! ಇವನೇನು ಮಾಡುವನೋ ಮರೆಯಾಗಿ ನಿಂತು ನೋಡುವೆನು. (ಮರೆಯಾಗುವನು.)

ಶಕಾರ—ಇರಲಿ, ಕೊಲ್ಲುವುದಕ್ಕೆ ಇದೇ ಸಮಯ. ಅಥವಾ ಈಗ ಕೊಲ್ಲಬಾರದು. ವಿಟನು ಮಹಾ ಕಪಟಿ. ಮರೆಯಲ್ಲಿ ನಿಂತು ನೋಡುತ್ತಿದ್ದು ಆಮೇಲೆ ನನ್ನ ತಲೆಗೆ ತಂದಾನು! (ಹೂಗಳನ್ನು ಕೊಯ್ದು ತೆಗೆದುಕೊಂಡು) ಎಲೆ ಹುಡುಗಿ, ವಸಂತಸೇನೆ, ಬಾಬಾ.

ವಿಟ—ಓಹೋ! ಇವನಿಗೆ ಈ ವಸಂತಸೇನೆಯಲ್ಲಿ ಅನುರಾಗ ವುಂಟಾಯಿತು. ಇನ್ನೇನೂ ಭಯವಿಲ್ಲವಷ್ಟೆ. (ಎಂದು ಹೊರಟು ಹೋಗುವನು).

ಶಕಾರ—ಒಳ್ಳೆಯ ಒಡವೆ, ಒಳ್ಳೆಯ ತಿಂಡಿ, ಇನ್ನೂ ನಿನಗೆ ಬೇಕಾದುದನ್ನೆಲ್ಲಾ ಕೊಡುವೆನು. ಇಷ್ಟು ಹೇಳಿದರೂ ನನ್ನ ಸಂಗಡ ಮಾತನಾಡುವುದಿಲ್ಲವಲ್ಲಾ. ನಾನು ಮನುಷ್ಯನೇ ಅಲ್ಲ! ಕಲ್ಲು! ಎಂದು ತಿಳಿದುಕೊಂಡೆಯೋ?

ವಸಂತಸೇನೆ—ಆಹಾ! ಅದಕ್ಕೆ ಸಂದೇಹವೇನು. (ತಲೆಯನ್ನು ಬಗ್ಗಿಸಿಕೊಂಡು) ಚಿಃ! ನೀಚನೆ, ದ್ರವ್ಯದ ಆಸೆಯನ್ನು ಹುಟ್ಟಿಸಿ, ಮೋಸ ಮಾಡುವೆಯಾ? ಈವರೆಗೂ ಸೀಮಾವಿನ ಮರವನ್ನು ಆಶ್ರಯಿಸಿದ್ದು ಈಗ ಮುಳ್ಳುಮುತ್ತುಗದ ಮರವನ್ನು ಆಶ್ರಯಿಸಲೇ?

ಶಕಾರ—ಎಲೆ ಬಡ್ಡಿ, ಆ ದರಿದ್ರ ಚಾರುದತ್ತನು ಸೀಮಾವಿನ ಮರ. ನಾನು ಮುತ್ತುಗವೂ ಅಲ್ಲ, ಮುಳ್ಳುಮುತ್ತುಗವೊ? ಹೀಗೆ ನನ್ನನ್ನು ಬಯ್ಯುತ್ತಾ ಇನ್ನೂ ಆ ನೀಚನ ಸ್ಮರಣೆಯನ್ನು ಬಿಡುವುದಿಲ್ಲವೆ?

ವಸಂತಸೇನೆ—ಮನಸ್ಸಿನಲ್ಲಿಯೇ ಇರುವವನನ್ನು ಸ್ಮರಿಸದೆ ಹೇಗಿದ್ದೇನು?

ಶಕಾರ—ಎಲೆ, ಇರಲಿ; ಆ ದರಿದ್ರನನ್ನೇ ಹಂಬಲಿಸುವ ನಿನ್ನನ್ನು ಈಗಲೇ ಸಂಹರಿಸುವೆನು. ನಿಲ್ಲು ನಿಲ್ಲು; ಎಲ್ಲಿ ಅವನು ಬಂದು ನಿನ್ನನ್ನು ಬಿಡಿಸಿಕೊಳ್ಳಲಿ ನೋಡೋಣ.

ವಸಂತಸೇನೆ—ನನ್ನನ್ನು ಕಂಡರೆ ಬಿಡಿಸಿಕೊಂಡೇ ಹೋಗುವನು.

ಶಕಾರ—ಭಾರತ ಯುದ್ಧದಲ್ಲಿ, ಚಾಣಕ್ಯನು ಸೀತೆಯನ್ನೂ, ಜಟಾಯುವು ದ್ರೌಪದಿಯನ್ನೂ ಕೊಂದಂತೆ ನಿನ್ನನ್ನು ಈಗಲೇ ಕೊಲ್ಲುವೆನು. (ಹೊಡೆಯುವನು.)

ವಸಂತಸೇನೆ—ಹಾ! ತಾಯೇ! ಎಲ್ಲಿರುವೆ? ಹಾ! ಆರ್ಯಚಾರುದತ್ತನೆ! ಜಾಗ್ರತೆಯಾಗಿ ಬಂದು ನನ್ನನ್ನು ಬಿಡಿಸಿಕೊ! ಅಯ್ಯೋ! ನನ್ನ ಕೋರಿಕೆಯನ್ನು ನೆರವೇರಿಸಿಕೊಳ್ಳುವುದಕ್ಕೆ ಮೊದಲೇ ಪ್ರಾಣಬಿಡುವ ಕಾಲ ಬಂದಿತಲ್ಲಾ! ಏನುಮಾಡಲಿ? ಗಟ್ಟಿಯಾಗಿ ಕೂಗಿಕೊಳ್ಳಲೇ? ಅಥವಾ ವಸಂತಸೇನೆಯು ಗಟ್ಟಿಯಾಗಿ ಕೂಗಿಕೊಂಡಳೆಂದರೆ ನನಗೇ ಅಪಮಾನವಲ್ಲವೆ? ಏನಾದರೂ ಆಗಲಿ. ಚಾರುದತ್ತನೆ, ನಿನಗೆ ವಂದಿಸುವೆನು.

ಶಕಾರ—(ಕೋಪದಿಂದ ಕತ್ತನ್ನು ನುಲಿಯುತ್ತಾ) ಇನ್ನೂ ಆ ನೀಚನ ಹೆಸರನ್ನು ಹೇಳುವೆಯಾ? ಈಗ ಅವನನ್ನು ಸ್ಮರಿಸು ಸ್ಮರಿಸು. (ಎಂದು ಹೊಡೆಯುವನು ; ವಸಂತಸೇನೆಯು ಕೆಳಕ್ಕೆ ಬೀಳುವಳು.) ನಾನು ಅಪೇಕ್ಷಿಸುತ್ತಿದ್ದರೂ, ಇವಳು ನನ್ನನ್ನು ಅಪೇಕ್ಷಿಸಲಿಲ್ಲವಲ್ಲಾ ಎಂಬ ಕೋಪದಿಂದ ಇವಳ ಹೆಸರು ತೊಡೆದುಹೋಗುವಂತೆ ಮಾಡಿದೆನು. ಪ್ರಯೋಜನವೇನು? ಈಗ ನನ್ನ ತಾಯ್ತಂದೆಗಳಿದ್ದಿದ್ದರೆ ನನ್ನ ಪರಾಕ್ರಮವನ್ನು ಕಂಡು ಎಷ್ಟು ಕೊಂಡಾಡುತ್ತಿದ್ದರೊ! ಆಗಲಿ, ಅವರಿಗೇ ಪುಣ್ಯವಿಲ್ಲ. ಇನ್ನು ಆ ಹಾಳು ವಿಟ—ಮುದಿಹಂದಿ—ಬರುವ ಹೊತ್ತಾಯಿತು. ಆದುದರಿಂದ ಈ ಸ್ಥಳವನ್ನು ಬಿಟ್ಟು ದೂರವಾಗಿರುವೆನು.

(ವಿಟನು ಸ್ಥಾವರಕನೊಡನೆ ಬರುವನು ; ಶಕಾರನು
ವಿಟನ ಕಾಲಿಗೆ ಬೀಳುವನು.)

ವಿಟ—(ಸ್ವಗತ) ಇವನು ನನ್ನ ಕಾಲನ್ನು ಕಟ್ಟಿಕೊಳ್ಳುವುದನ್ನು ನೋಡಿದರೆ ಪ್ರಾಯಶಃ ವಸಂತಸೇನೆಯನ್ನು ಕೊಂದೇ ಇರಬಹುದು. ಅಯ್ಯೋ! ನೀಚ! ಎಂತಹ ಕೆಟ್ಟಕೆಲಸವನ್ನು ಮಾಡಿದನು! ಸ್ತ್ರೀವಧೆಯನ್ನು ಮಾಡಿದ ಪಾಪಿಷ್ಠನಾದ ಇವನ ಸಂಪರ್ಕದಿಂದ ನಾವೆಲ್ಲರೂ ಪತಿತರಾದೆವಲ್ಲ! (ಪ್ರಕಾಶ) ಅಯ್ಯಾ! ಸ್ಥಾವರಕನನ್ನು ಸಮಾಧಾನಪಡಿಸಿ ಕರೆದುಕೊಂಡು ಬಂದಿರುವೆನು.

ಶಕಾರ—ನೀವಿಬ್ಬರೂ ಸುಖವಾಗಿ ಬಂದಿರಾ?

ಸ್ಥಾವರಕ—ಬಂದೆವು.

ವಿಟ—ನಿನ್ನ ವಶಕ್ಕೆ ಕೊಟ್ಟಿದ್ದುದೆಲ್ಲಿ?

ಶಕಾರ—ಏನನ್ನು ಕೊಟ್ಟಿದ್ದೆ.

ವಿಟ—ವಸಂತಸೇನೆಯನ್ನು.

ಶಕಾರ—ಹೋದಳು.

ವಿಟ—ಎಲ್ಲಿಗೆ?

ಶಕಾರ—ನಿನ್ನ ಹಿಂದೆಯೇ.

ವಿಟ—ಅವಳು ಅತ್ತಕಡೆ ಬರಲಿಲ್ಲವಲ್ಲ?

ಶಕಾರ—ನೀನು ಯಾವ ದಿಕ್ಕಿಗೆ ಹೋದೆ?

ವಿಟ—ಪೂರ್ವದಿಕ್ಕಿಗೆ.

ಶಕಾರ—ಅವಳು ದಕ್ಷಿಣ ದಿಕ್ಕಿಗೆ ಹೋದಳು.

ವಿಟ—ನೀನು ಹೇಳುವುದೇನೋ ಬಹಳ ಸಂದೇಹಾಸ್ಪದವಾಗಿರುವುದು. ಅವಳನ್ನು ಏನುಮಾಡಿದೆ? ಸತ್ಯವಾಗಿ ಹೇಳು.

ಶಕಾರ--ಇದೋ, ನೋಡು, ನನ್ನ ಕಾಲಿನಿಂದ ನಿನ್ನ ತಲೆಯನ್ನು ಮುಟ್ಟಿ ಚೆನ್ನಾಗಿ ಪ್ರಮಾಣಮಾಡುವೆನು. ನಿಶ್ಚಯವಾಗಿಯೂ ನಾನು ವಸಂತಸೇನೆಯನ್ನು ಕೊಂದುಹಾಕಿದೆನು. ಇನ್ನು ನೀನು ಧೈರ್ಯವಾಗಿರು.

ವಿಟ--(ವಿಷಾದಪಡುತ್ತ) ಅಯ್ಯೊ! ನಿಶ್ಚಯವಾಗಿ ಕೊಂದೆಯಾ?

ಶಕಾರ--ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲದಿದ್ದರೆ ಇಲ್ಲಿ ಬಾ. ನನ್ನ ಪರಾಕ್ರಮವನ್ನು ನೋಡು. (ವಸಂತಸೇನೆಯನ್ನು ತೋರಿಸುವನು.)

ವಿಟ—(ನೋಡಿ) ನಿರ್ಭಾಗ್ಯನಾದ ನಾನು ಕೆಟ್ಟೆನು. ಹಾಹಾ! (ಎಂದು ಮೂರ್ಛಿತನಾಗಿ ಕೆಳಕ್ಕೆ ಬೀಳುವನು.)

ಸ್ಥಾವರಕ—ಆರ್ಯನೆ, ಸಂತೈಸಿಕೊ ಸಂತೈಸಿಕೊ. ವಸಂತಸೇನೆಯನ್ನು ಕೊಂದವರಾರೂ ಅಲ್ಲ. ವಿಚಾರಮಾಡದೆ ರಥವನ್ನು ತೆಗೆದುಕೊಂಡುಬಂದ ನಾನೇ ಅವಳನ್ನು ಕೊಂದವನು.

ವಿಟ--ಹಾ! ವಸಂತಸೇನೆಯೆ! (ವ್ಯಥೆಯಿಂದ) ಎಲೋ, ನೀನು ಬಹು ಪಾಪಿಷ್ಠ. ಸ್ತ್ರೀಯನ್ನು ಕೊಂದೆ. ಇನ್ನು ನಿನ್ನಲ್ಲಿರುವುದು ಸರಿಯಲ್ಲ. (ಎಂದು ಹೊರಡುವಷ್ಟರಲ್ಲಿ)

ಶಕಾರ--(ಜಾಗ್ರತೆಯಾಗಿ ಹಿಡಿದುಕೊಳ್ಳುವನು.)

ವಿಟ--ಎಲೋ! ಪಾಪಿ, ನನ್ನನ್ನು ಮುಟ್ಟಬೇಡ. ನಿನ್ನ ಸಹವಾಸ ಸಾಕು. ನಾನು ಹೊರಟುಹೋಗುವೆನು.

ಶಕಾರ—ಎಲಾ, ಆ ವಸಂತಸೇನೆಯನ್ನು ನೀನೇ ಕೊಂದು ಆ ತಪ್ಪನ್ನು ನನ್ನ ತಲೆಯಮೇಲೆ ಹಾಕಿ ಹೊರಟುಹೋಗುವೆಯಾ? (ಎಂದು ತಡೆಯುವನು.)

ವಿಟ—ಚೀ! ನೀಚನೆ, ನೀನು ಹಾಳಾದೆ.

ಶಕಾರ--ಎಲೋ, ನಿನಗೆ ಕೋಟಿ ವರಹ ಚಿನ್ನವನ್ನೂ ಬೇಕಾದುದನ್ನೆಲ್ಲವನ್ನೂ ಕೊಡುವೆನು. ಈ ಕಾರ್ಯವನ್ನು ಶಕಾರ ಮಾಡಿದನೆಂದು ಮಾತ್ರ ಯಾರಿಗೂ ಹೇಳಬೇಡ.

ವಿಟ--ನೀನು ಕೊಡತಕ್ಕುದೆಲ್ಲಾ ನಿನ್ನಲ್ಲಿಯೇ ಇರಲಿ.

ಸ್ಥಾವರಕ--ಶಿವಶಿವಾ! ಇಂತಹ ಕೆಟ್ಟಕೆಲಸವನ್ನು ಮಾಡಿ ತಪ್ಪಿಸಿಕೊಳ್ಳುವುದಕ್ಕುಪಾಯಮಾಡುವನಲ್ಲ.

ಶಕಾರ--(ನಗುವನು.)

ವಿಟ--ಎಲಾ! ಪಾಪಿ! ಈ ಹಾಳು ನಗೆಯನ್ನು ಬಿಡು. ನಿನ್ನ ವಿಶ್ವಾಸ ಸಾಕು. ಇನ್ನುಮೇಲೆ ನಿನ್ನ ಕೆಟ್ಟಸ್ನೇಹವೆಂದಿಗೂ ಬೇಡ.

ಶಕಾರ--ಅಯ್ಯಾ, ಕೋಪಮಾಡಬೇಡ; ಬಾ. ಸರೋವರಕ್ಕೆ ಹೋಗಿ ಆಡೋಣ.

ವಿಟ--ನಾನು ಪತಿತನಲ್ಲದಿದ್ದರೂ ನಿನ್ನಸಹವಾಸದಲ್ಲಿದ್ದುದರಿಂದ ನನ್ನನ್ನು ಜನರು ಪತಿತನೆಂದು ತಿಳಿದುಕೊಳ್ಳುವರು. ಅಯ್ಯೋ! ಇಂತಹ ಸ್ತ್ರೀಹತ್ಯಮಾಡಿದ ನಿನ್ನ ಜತೆಯಲ್ಲಿ ಪಟ್ಟಣಕ್ಕೆ ಬಂದು ನಾನು ನಗರದಲ್ಲಿರುವ ಸ್ತ್ರೀಯರಿಗೆ ಹೇಗೆ ಮುಖವನ್ನು ತೋರಿಸಲಿ? ಹಾ! ವಸಂತಸೇನೆ, ನೀನು ಇನ್ನೊಂದು ಜನ್ಮದಲ್ಲಿಯಾದರೂ ಸೂಳೆಯಾಗದೆ ಸತ್ಕುಲದಲ್ಲಿ ಜನಿಸು.

ಶಕಾರ--ಪುಷ್ಪಕರಂಡಕ ಜೀರ್ಣೋದ್ಯಾನದಲ್ಲಿ ವಸಂತಸೇನೆಯನ್ನು ಕೊಂದು ಈಗ ಎಲ್ಲಿಗೆ ಹೋಗುವೆ? ನಮ್ಮ ಭಾವನಾದ ಪಾಲಕಮಹಾರಾಜನ ಬಳಿಗೆ ಬಾ; ಅಲ್ಲಿ ವ್ಯವಹರಿಸುವೆನು. (ಎಂದು ವಿಟನನ್ನು ಹಿಡಿಯುವನು.)

ವಿಟ--ಎಲೋ, ದುಷ್ಟನೆ, ಏನೆಂದೆ? (ಕತ್ತಿಯನ್ನು ಹಿರಿಯುವನು)

ಶಕಾರ--ಎಲೋ, ನಾನೆಂದಮಾತಿಗೆ ಹೆದರಿಕೊಂಡೆಯೋ? ಅದೇನೂ ಇಲ್ಲ. ಸುಮ್ಮನೆ ಹೇಳಿದೆನು. ಹೋಗು.

ವಿಟ--(ಸ್ವಗತ) ಇನ್ನಿಲ್ಲಿರುವುದು ಸರಿಯಲ್ಲ. ಆದುದರಿಂದ ಆರ್ಯಕ, ಶರ್ವಿಳಕ, ಚಂದನಕರಿರುವ ಸ್ಥಳಕ್ಕೆ ಹೊರಟುಹೋಗುವೆನು. (ಎಂದು ಹೋಗುವನು.)

ಶಕಾರ--ಹಾಳಾಗಿಹೋಗು. ಎಲೋ. ಸ್ಥಾವರಕನೆ, ನಾನು ಮಾಡಿದುದು ಹೇಗಿದೆ?

ಸ್ಥಾವರಕ--ನೀನು ಬಹಳ ಅಕಾರ್ಯವನ್ನು ಮಾಡಿದೆ.

ಶಕಾರ--ಏನೆಂದೆ? ನಾನು ಮಾಡಿದುದು ಕೆಟ್ಟಕೆಲಸವೇ? ಹಾಗೆನ್ನಬೇಡ. ಈ ಆಭರಣವನ್ನು ತೆಗೆದುಕೊ. (ಕೊಟ್ಟು) ಇದು ನಾನು ಅಲಂಕರಿಸಿಕೊಳ್ಳುವಾಗ ಮಾತ್ರ ನನ್ನದು. ಇತರಕಾಲದಲ್ಲೆಲ್ಲಾ ನಿನ್ನದೇ.

ಸ್ಥಾವರಕ—ಇದು ನನಗೇಕೆ? ಇದಕ್ಕೆ ನೀನೇ ಯೋಗ್ಯನು.

ಶಕಾರ—ಆದರೆ ನೀನು ರಥವನ್ನು ತೆಗೆದುಕೊಂಡುಹೋಗಿ ನಾನು ಬರುವವರೆಗೂ ಸುಮ್ಮನೆ ಉಪ್ಪರಿಗೆಯಮೇಲೆ ಕುಳಿತಿರು.

ಸ್ಥಾವರಕ—ಅಪ್ಪಣೆಯ ಪ್ರಕಾರ. (ಎಂದು ಹೋಗುವನು.)

ಶಕಾರ—ವಿಟನಂತೂ ಹೊರಟುಹೋದನು. ನಾನು ಜಾಗ್ರತೆಯಾಗಿಹೋಗಿ ಆ ಸ್ಥಾವರಕನಿಗೆ ಸಂಕಲೆಯನ್ನು ತೊಡಿಸಿ ಎಲ್ಲಿಗೂ ಹೋಗದಂತೆ ನನ್ನ ಮನೆಯ ಉಪ್ಪರಿಗೆಯಲ್ಲೇ ಇರಿಸಿಕೊಂಡಿರುವೆನು. ಈ ಯೋಚನೆಯೇ ಸರಿ. ಈಗ ಇನ್ನೊಂದು ಬಾರಿ ಹೋಗಿನೋಡಿ ಆ ವಸಂತಸೇನೆ ಸಾಯದಿದ್ದರೆ ಚೆನ್ನಾಗಿ ಕೊಂದುಬರುವೆನು (ನೋಡಿ) ಓಹೋ! ಚೆನ್ನಾಗಿಯೇ ಸತ್ತುಹೋಗಿರುವಳು. ಇರಲಿ, ಯಾರಿಗೂ ಇವಳ ಗುರುತು ಸಿಕ್ಕದಂತೆ ಈ ಬಹಿರ್ವಾಸದಿಂದ ತುಂಬಾ ಮುಸುಕು ಹಾಕುವೆನು. (ಯೋಚಿಸಿ) ಇದು ಸರಿಯಲ್ಲ; ಚಾರುದತ್ತನ ಹೆಸರಿರುವುದು. ಇದನ್ನು ಯಾರಾದರೂ ಕಂಡರೆ ಪ್ರಮಾದ ಸಂಭವಿಸೀತು. ಆಗಲಿ, ಈ ತರಗೆಲೆಗಳಿಂದ ಮರೆಮಾಡುವೆನು. (ತರಗೆಲೆಯನ್ನು ಮುಚ್ಚಿ) ಚಾರುದತ್ತನು ದ್ರವ್ಯಕ್ಕೆ ಆಸೆಪಟ್ಟು ನಮ್ಮ ಪುಷ್ಪಕರಂಡಕ ಜೀರ್ಣೋದ್ಯಾನದಲ್ಲಿ ವಸಂತಸೇನೆಯನ್ನು ಕೊಂದುಹಾಕಿರುವನೆಂದು ನ್ಯಾಯಸ್ಥಾನಕ್ಕೆ ಹೋಗಿ ಬರೆಯಿಸಿ ಅಲ್ಲಿ ವ್ಯವಹರಿಸುವೆನು. ಹೇಗೂ ಏನಾದರೂ ಕಪಟವನ್ನುಮಾಡಿ ಆ ಚಾರುದತ್ತನ ಹೆಸರಿಲ್ಲದಂತೆ ಮಾಡಬೇಕು. (ಹೊರಟು, ಭಯದಿಂದ) ಅಯ್ಯೋ! ನಾನು ಎಲ್ಲೆಲ್ಲಿಹೋದರೂ ಈ ಹಾಳು ಜೈನಸನ್ಯಾಸಿಯು ಕಾವಿಯ ಬಟ್ಟೆಯನ್ನು ತೆಗೆದುಕೊಂಡು ನನ್ನ ಇದಿರಾಗಿ ಬರುವನಲ್ಲಾ! ಇವನು ನನ್ನನ್ನು ಕಂಡರೆ ಶಕಾರನೇ ವಸಂತ

ಸೇನೆಯನ್ನು ಕೊಂದನೆಂದು ನನ್ನಮೇಲೆ ಹೇಳಿಯಾನು! ಆದುದರಿಂದ ಮರೆಯಾಗಿ ಹೋಗುವೆನು. (ಎಂದು ಹೋಗುವನು).

ಭಿಕ್ಷು—(ಬಂದು) ಈ ಬಟ್ಟೆಯನ್ನು ಒಗೆದುದಾಯಿತು. ಮರಕ್ಕೆ ಕಟ್ಟಿ ಒಣಗಿಸುವೆನೆಂದರೆ ಕಪಿಗಳಕಾಟ ನೆಲದಮೇಲೆ ಹರಡುವುದಕ್ಕೆ ಧೂಳು. ಇನ್ನೆಲ್ಲಿ ಒಣಗಿಸಲಿ? (ನೋಡಿ) ಇರಲಿ, ಈ ತರಗಿನ ಗುಡ್ಡೆಯಮೇಲೆ ಹರವಿ ಒಣಗಿಸುವೆನು. (ತರಗಿನಮೇಲೆ ಹರವಿ) ಬುದ್ಧದೇವ, ನೀನೇ ಗತಿ. (ಎಂದು ಕುಳಿತು) ನಾನು ಜೂಜಿನಲ್ಲಿ ಸೋತ ಹತ್ತುವರಹಗಳನ್ನು ಕೊಡುವುದಕ್ಕೆ ಗತಿಯಿಲ್ಲದೆ ಸಂಕಟಪಡುತ್ತಿದ್ದ ಸಮಯದಲ್ಲಿ ಆ ವಸಂತಸೇನೆಯು ಹಸ್ತಾಭರಣವನ್ನು ಕೊಟ್ಟು ನನ್ನ ಕಷ್ಟವನ್ನು ಪರಿಹರಿಸಿದಳು. ಆದುದರಿಂದ ಆಕೆಯು ನನ್ನನ್ನು ಕ್ರಯಕ್ಕೆ ತೆಗೆದುಕೊಂಡಹಾಗಾಯಿತು. ಆಕೆಗೆ ನಾನು ಯಾವ ಪ್ರತ್ಯುಪಕಾರವನ್ನು ಮಾಡಿ ಋಣಮುಕ್ತನಾಗಲಿ? (ತರಗಿನ ಸದ್ದನ್ನು ಕೇಳಿ) ಇದೇನು! ಈ ತರಗಿನಲ್ಲಿ ಉಸಿರಾಡುವ ಶಬ್ದಕೇಳಿಸುವುದು. ಸರಿಸರಿ ತಿಳಿಯಿತು. ಒಣಗಿದ ತರಗಿನಮೇಲೆ ಒದ್ದೆಯಬಟ್ಟೆ ಬಿದ್ದಿರುವುದರಿಂದ ಹೀಗೆ ಸದ್ದಾಗುವುದು!

ವಸಂತಸೇನೆ—(ಹೊರಕ್ಕೆ ಕೈನೀಡುವಳು)

ಭಿಕ್ಷು—ಇದೇನಿದು! ಅಲಂಕೃತವಾದ ಸ್ತ್ರೀಹಸ್ತ!

ವಸಂತಸೇನೆ—(ಮತ್ತೊಂದುಕೈ ನೀಡುವಳು)

ಭಿಕ್ಷು—ಇದೇನು! ಇನ್ನೊಂದಕೈ ಕಾಣುವುದಲ್ಲ! (ಚೆನ್ನಾಗಿ ನೋಡಿ) ಈ ಹಸ್ತವನ್ನು ಪೂರ್ವದಲ್ಲಿ ಎಲ್ಲೋ ನೋಡಿದಹಾಗಿದೆ. ಅಥವಾ ಸಂದೇಹವೇಕೆ? ಜೂಜುಗಾರನಿಗಾಗಿ ನೀನು ಹೆದರಬೇಡವೆಂದು ನನಗೆ ಅಭಯವನ್ನು ಕೊಟ್ಟ ಹಸ್ತವೇ ಇದು. ಆಗಲಿ, ಚೆನ್ನಾಗಿ ನೋಡುವೆನು. (ತರಗನ್ನು ತೆಗೆದು ನೋಡಿ) ಅಯ್ಯೋ! ಇವಳು ವಸಂತಸೇನೆ.

ವಸಂತಸೇನೆ—(ನೀರುಬೇಕೆಂದು ಸಂಜ್ಞೆಮಾಡುವಳು)

ಭಿಕ್ಷು—ಅಯ್ಯೋ! ನೀರು ಕೇಳುವಳಲ್ಲಾ! ಸರೋವರವು ದೂರವಾಗಿರುವುದು. ಈ ಬಟ್ಟೆಯನ್ನಾದರೂ ಹಿಂಡುವೆನು. (ಬಟ್ಟೆಯನ್ನು ಹಿಂಡುವನು.)

ವಸಂತಸೇನೆ—(ಚೇತರಿಸಿಕೊಂಡು ಏಳುವಳು, ಭಿಕ್ಷು ಬಟ್ಟೆಯಿಂದ ಬೀಸುವನು).

ವಸಂತಸೇನೆ—ನೀನು ಯಾರು ?

ಭಿಕ್ಷು—ನನ್ನನ್ನು ಮರತೆಯಾ ? ಹಸ್ತಾಭರಣವನ್ನು ಕೊಟ್ಟು ನೀನು ನನ್ನನ್ನು ಕೊಂಡುಕೊಳ್ಳಲಿಲ್ಲವೆ ?

ವಸಂತಸೇನೆ—ಆಹಾ ! ಈಗ ಜ್ಞಾಪಕಕ್ಕೆ ಬಂದಿತು.

ಭಿಕ್ಷು—ವಸಂತಸೇನೆ ! ಇದೇನು ?

ವಸಂತಸೇನೆ—ಸೂಳೆಯಾದವಳಿಗೆ ಆಗತಕ್ಕ ಗತಿಯಾವುದೋ ಅದು.

ಭಿಕ್ಷು—ವಸಂತಸೇನೆ ! ಮರಕ್ಕೆ ಹಬ್ಬಿಕೊಂಡಿರುವ ಈ ಬಳ್ಳಿಯನ್ನು ಹಿಡಿದುಕೊಂಡು ಮೆಲ್ಲಗೆ ಏಳು.

ವಸಂತಸೇನೆ—(ಏಳುವಳು).

ಭಿಕ್ಷು—ಈ ಆಶ್ರಮದಲ್ಲಿ ನನ್ನ ತಂಗಿ ಇರುವಳು. ನೀನು ಅಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ಮನೆಗೆ ಹೋಗುವೆಯಂತೆ. ಮೆಲ್ಲಗೆ ನಡೆ. (ಇಬ್ಬರೂ ಹೊರಡುವರು).

ಭಿಕ್ಷು—ದಾರಿಬಿಡಿ ! ದಾರಿಬಿಡಿ ! ಈಕೆ ಯುವತಿ. ಸನ್ಯಾಸಿಗೆ ಯುವತಿಯನ್ನು ಕಟ್ಟಿಕೊಂಡೇನು ? ಇವನು ಎಂತಹ ಸನ್ಯಾಸಿ ! ಎಂದು ನಿಂದಿಸಬೇಡಿ. ಕೈ, ಬಾಯಿ, ಹೃದಯ ಈ ಮೂರು ಶುದ್ಧವಾಗಿರುವ ಪುರುಷನಿಗೆ ಈ ಲೋಕದಲ್ಲಿ ರಾಜಭೀತಿಯೂ ಇಲ್ಲ. ಪರಲೋಕದಲ್ಲಿ ಯಮನ ಭೀತಿಯೂ ಇಲ್ಲ. (ಎಂದು ಇಬ್ಬರೂ ಹೋಗುವರು)

ಇದು

ವಸಂತಸೇನಾಮೋಟನವೆಂಬ ಎಂಟನೆಯಂಕಂ.

---

# ಒಂಭತ್ತನೆಯಂಕಂ

(ಸ್ಥಾನ—ನ್ಯಾಯಸ್ಥಾನ.)

ಶೋಧನಕ—(ಬಂದು) ನ್ಯಾಯಸ್ಥಾನಕ್ಕೆ ಹೋಗಿ ಆಸನಗಳನ್ನು ಸಿದ್ಧಮಾಡೆಂದು ನ್ಯಾಯಾಧಿಕಾರಿಗಳು ಆಜ್ಞಾಪಿಸಿರುವರು. ಆದುದರಿಂದ ಈಗ ಹೋಗಿ ಜಾಗ್ರತೆಯಾಗಿ ಆಸನಗಳನ್ನು ಸಿದ್ಧಪಡಿಸುವೆನು. (ಒಳಕ್ಕೆ ಹೋಗಿ ಪುನಃ ಬಂದು) ಎಲ್ಲ ಸಿದ್ಧವಾಯಿತು. ಇದನ್ನು ಅಧಿಕಾರಿಗಳಿಗೆ ತಿಳಿಸುವೆನು. (ಹೊರಟು ನೋಡಿ) ಆಹ! ಈ ದುಷ್ಟನಾದ ಶಕಾರನು ಇದಿರಾಗಿ ಬರುತ್ತಿರುವನಲ್ಲಾ! ಏನು ಮಾಡಲಿ? ಇವನ ಕಣ್ಣಿಗೆ ಕಾಣಿಸಿಕೊಳ್ಳದಂತೆ ಮರೆಯಾಗಿ ಇರುವೆನು. (ಮರೆಯಾಗುವನು).

ಶಕಾರ—(ಅಲಂಕೃತನಾಗಿ ಬಂದು) ಇದೇನು? ಪೀಠಗಳು ಮಾತ್ರ ಸಿದ್ಧವಾಗಿರುವುವು. ನ್ಯಾಯಾಧಿಕಾರಿಗಳು ಏಕೋ ಇನ್ನೂ ಬಂದಿಲ್ಲ. ಅವರು ಬರುವವರೆಗೂ ಇಲ್ಲಿರುವೆನು. (ಎಂದು ಕುಳಿತುಕೊಳ್ಳುವನು).

ಶೋಧನಕ—(ಮತ್ತೊಂದು ಕಡೆಯಿಂದ ಬಂದು ನೋಡಿ) ಓಹೋ! ಅಧಿಕಾರಿಗಳು ಬರುತ್ತಿರುವರು.

ನ್ಯಾಯಾಧಿಪತಿ—(ಲೇಖಕ ಮೊದಲಾದವರೊಡನೆ ಬಂದು) ಅಯ್ಯಾ, ಲೇಖಕನೇ,

ಲೇಖಕ—ಏನಪ್ಪಣೆ?

ನ್ಯಾಯಾಧಿಪತಿ—ಅಧಿಕಾರಿಯ ಮನಸ್ಸು ಯಾವಾಗಲೂ ವ್ಯವಹಾರದಲ್ಲಿಯೇ ಪರವಶವಾಗಿರುವುದರಿಂದ ಕಕ್ಷಿ ಪ್ರತಿಕಕ್ಷಿಗಳ ಮಾತು ಸತ್ಯವೋ, ಅಸತ್ಯವೋ ಯಾವುದನ್ನೂ ತಿಳಿಯುವುದಸಾಧ್ಯವಾಗುವುದು. ಕಕ್ಷಿಯು ಅನ್ಯಾಯವಾಗಿ ಪ್ರತಿಕಕ್ಷಿಯ ದೋಷವನ್ನು ಮಾತ್ರ ಉದ್ಘಾಟನೆ ಮಾಡುವನೇ ಹೊರತು ತನ್ನ ದೋಷವನ್ನು ಪ್ರಕಾಶಮಾಡುವುದೇ ಇಲ್ಲ. ಕಕ್ಷಿಯಮಾತು ಸುಳ್ಳಾಗಿದ್ದರೂ ಸಾಕ್ಷಿಯೇ ಮೊದಲಾದುವುಗಳಿಂದ ಅಧಿಕಾರಿಯು ಅವನಮಾತನ್ನೇ ನಂಬಬೇಕಾಗುವುದು. ಅದನ್ನು ನಂಬಿ ಕಕ್ಷಿಯ ಈಷ್ಟಾನುಸಾರವಾಗಿಯೇ ತೀರ್ಪುಮಾಡಿದರೆ ಆ ದೋಷಕ್ಕೆ ರಾಜನು

ಗುರಿಯಾಗುವನು. ಇದರಿಂದ ಅಧಿಕಾರಿಯು ಗುಣಶಾಲಿಯಾಗಿದ್ದರೂ ಅವನನ್ನು ಜನಗಳೆಲ್ಲರೂ ನಿಂದಿಸುವರು. ನ್ಯಾಯಾಧಿಪತಿಯು ಶಾಸ್ತ್ರವನ್ನು ತಿಳಿದಿರಬೇಕು ಕಪಟದಲ್ಲಿ ನಿಪುಣನಾಗಿರಬೇಕು. ವಾಙ್ಮಿಯಾಗಿಯೂ ಕ್ಷಮಾಶಾಲಿಯಾಗಿಯೂ ಇರಬೇಕು. ತನಗೆ ಮಿತ್ರರೆಂದಾಗಲಿ ಶತ್ರುಗಳೆಂದಾಗಲಿ ಪಕ್ಷಪಾತವಿಡಕೂಡದು. ಕಕ್ಷಿ ಪ್ರತಿಕಕ್ಷಿಗಳ ಮುಖವನ್ನು ನೋಡಿದ ಮಾತ್ರದಿಂದಲೇ ಇವನ ಮಾತು ಸತ್ಯ, ಇವನ ಮಾತು ಅಸತ್ಯ, ಎಂದು ಊಹಿಸಲು ಶಕ್ತನಾಗಿರಬೇಕು. ದೀನರನ್ನು ಕಾಪಾಡಬೇಕು. ದುಷ್ಟರನ್ನು ನಿಗ್ರಹಿಸಬೇಕು. ಒಂದುವೇಳೆ ರಾಜನಿಗೆ ಕೋಪಬಂದರೂ ಅದನ್ನು ಹೋಗಲಾಡಿಸುವಷ್ಟು ಶಕ್ತಿಯುಳ್ಳವನಾಗಿಯೂ ಧರ್ಮಿಷ್ಠನಾಗಿಯೂ ಇರಬೇಕು.

ಲೇಖಕ—ನಿಷ್ಪಕ್ಷಪಾತಿಗಳಾದ ತಮ್ಮಲ್ಲಿ ದೋಷವಿರುವುದೆಂದು ಹೇಳುವ ಜನರು ಬೆಳದಿಂಗಳನ್ನು ಕತ್ತಲೆಯೆಂದೇ ಹೇಳುವರು.

(ಎಲ್ಲರೂ ಕುಳಿತುಕೊಳ್ಳುವರು)

ನ್ಯಾಯಾಧಿಪತಿ—ಅಯ್ಯಾ, ಶೋಧನಕನೆ, ನ್ಯಾಯವನ್ನಪೇಕ್ಷಿಸಿ ಯಾರು ಬಂದಿರುವರೋ ನೋಡು.

ಶೋಧನಕ—ಅಪ್ಪಣೆಯ ಪ್ರಕಾರ. (ಎಂದು ನೋಡಿ) ಅಯ್ಯಾ, ಕಾರ್ಯಾರ್ಥಿಗಳು ಯಾರು ?

ಶಕಾರ—ಅಯ್ಯಾ, ನಾನು ! ಮನುಷ್ಯ ! ದೊಡ್ಡಮನುಷ್ಯ ! ದೊರೆಯ ಭಾವಮೈದ ! ಕಾರ್ಯಾರ್ಥಿಯಾಗಿ ಬಂದಿರುವೆನು.

ಶೋಧನಕ—(ಸ್ವಗತ) ಮೊಟ್ಟಮೊದಲೇ ಈ ಅನ್ಯಾಯಕಾರನೆಲ್ಲಿ ಬಂದನು ? (ಪ್ರಕಾಶ) ಅಯ್ಯಾ, ಸ್ವಲ್ಪ ನಿಲ್ಲು. ಅಧಿಕಾರಿಗಳಿಗೆ ತಿಳಿಸುವೆನು. (ನ್ಯಾಯಾಧಿಪತಿಯ ಸಮೀಪಕ್ಕೆ ಬಂದು) ಅಯ್ಯಾ, ಶಕಾರನು ಬಂದಿರುವನು.

ನ್ಯಾಯಾಧಿಪತಿ—ಸೂರ್ಯನ ಉದಯಕಾಲದಲ್ಲಿಯೇ ಗ್ರಹಣಹಿಡಿದ ಹಾಗೆ ಮೊಟ್ಟಮೊದಲೇ ಈ ಹಾಳು ಶಕಾರನ ವ್ಯವಹಾರ ಬಂದಿತೆ! ಈ ಹೊತ್ತು ಅನೇಕ ವ್ಯವಹಾರಗಳಿರುವುದರಿಂದ ನಿನ್ನ ವ್ಯವಹಾರವು ನಾಳೆಯ ದಿನ ನಡೆಯಿಸಲ್ಪಡುವುದೆಂದು ಅವನಿಗೆ ಹೇಳಿ ಕಳುಹಿಸು.

ಶೋಧನಕ—ಅಪ್ಪಣೆಯ ಪ್ರಕಾರ (ಶಕಾರನ ಬಳಿಗೆ ಬಂದು) ಅಯ್ಯಾ, ಈ ಹೊತ್ತು ನಿನ್ನ ವ್ಯವಹಾರವನ್ನು ನಡೆಯಿಸುವುದಕ್ಕಾಗುವುದಿಲ್ಲ. ಆದುದರಿಂದ ನಾಳೆಯದಿನ ಬರುವಂತೆ ಅಪ್ಪಣೆಯಾಯಿತು.

ಶಕಾರ—(ಕೋಪದಿಂದ) ನನ್ನ ವ್ಯವಹಾರವು ಈ ಹೊತ್ತಿಲ್ಲವೊ ? ಆಗಲಿ, ಈಗಲೇ ನಾನು ಹೋಗಿ ನಮ್ಮಕ್ಕನ ಗಂಡನಿರುವನಲ್ಲಾ ! ಪಾಲಕ ಮಹಾರಾಜ ! ಅವನು ನನಗೆ ಭಾವನಾಗಬೇಕು. ಅವನಿಗೆ ಹೇಳಿ ನಮ್ಮಕ್ಕನಿಗೂ, ನಮ್ಮ ಅಮ್ಮನಿಗೂ ತಿಳಿಸಿ, ಈ ಅಧಿಕಾರಿಯನ್ನು ತಳ್ಳಿಸಿ, ಇಲ್ಲಿಗೆ ಮತ್ತೊಬ್ಬ ಅಧಿಕಾರಿಯನ್ನು ತರಿಸದೇ ಇದ್ದರೆ ನಾನು ಶಕಾರನೇ ? (ಎಂದು ಮೀಸೆಯನ್ನು ತಿರುಹುತ್ತಾ ಹೊರಡಲು ಯತ್ನಿಸುವನು).

ಶೋಧನಕ—ಅಯ್ಯಾ, ರಾಜಶ್ಯಾಲಕನೆ, ಸ್ವಲ್ಪ ನಿಲ್ಲು. ಅಧಿಕಾರಿಗಳಿಗೆ ತಿಳಿಸುವೆನು. (ನ್ಯಾಯಾಧಿಪತಿಯ ಸಮೀಪಕ್ಕೆ ಬಂದು) ನಾಳೆ ಬಾರೆಂದು ಹೇಳಿದುದಕ್ಕೆ ಶಕಾರನು ಹೀಗೆ ಹೇಳಿದನು. (ಎಂದು ಕಿವಿಯಲ್ಲಿ ಹೇಳುವನು).

ನ್ಯಾಯಾಧಿಪತಿ—ಆ ಮೂರ್ಖನು ಏನು ಮಾಡಿದರೂ ಮಾಡಬಹುದು. ನಿನ್ನ ವ್ಯವಹಾರ ಈ ಹೊತ್ತೇ ನಡೆಯುವುದು. ಹೋಗಬೇಡ, ಎಂದು ಹೇಳು.

ಶೋಧನಕ—(ಶಕಾರನನ್ನು ಕುರಿತು) ನಿನ್ನ ವ್ಯವಹಾರ ಈ ಹೊತ್ತೇ ನಡೆಯುವುದಂತೆ. ಬಾ.

ಶಕಾರ—ಮೊದಲು ಈ ಹೊತ್ತು ನಡೆಯುವುದಿಲ್ಲ. ಈಗ ಈ ಹೊತ್ತೇ ನಡೆಯುವುದು. ಅಧಿಕಾರಿಯಾದರೇನು, ಅವನಪ್ಪನಾದರೇನು, ನನ್ನ ಹೆಸರೆತ್ತಿದರೆ ಎಂತಹನಾದರೂ ನಡುಗಬೇಕು. (ಅಧಿಕಾರಿಯ ಬಳಿಗೆ ಹೋಗಿ) ಅಯ್ಯಾ, ನಾನು ಕ್ಷೇಮ, ನಿಮಗೆ ಕ್ಷೇಮವನ್ನುಂಟುಮಾಡುವೆನು. ಇಲ್ಲಇಲ್ಲ. ಮಾಡುವುದಿಲ್ಲ.

ನ್ಯಾಯಾಧಿಪತಿ—(ಸ್ವಗತ) ಇವನು ಯೋಗಕ್ಷೇಮವನ್ನು ವಿಚಾರಿಸುವ ಬಗೆಯೇ ಬಲು ಚೆನ್ನಾಗಿದೆ. (ಪ್ರಕಾಶ) ಕುಳಿತುಕೊ.

ಶಕಾರ—(ನಕ್ಕು) ಹೊಳೆಯನೀರಿಗೆ ದೊಣ್ಣೆನಾಯಕನ ಅಪ್ಪಣೆಯೆ ? ಈ ನ್ಯಾಯಸ್ಥಾನವು ನಮ್ಮ ಭಾವನದು. ನನಗೆಲ್ಲಿ ತೋರು

ವುದೋ ಅಲ್ಲಿ ಕುಳಿತುಕೊಳ್ಳುವೆನು. ನೀವು ಹೇಳುವುದೇನು ? ನಾನು ಕೇಳುವುದೇನು ? ಇದೊ, ಇಲ್ಲಿ ಕುಳಿತುಕೊಳ್ಳುವೆನು. (ನ್ಯಾಯಾಧಿಪತಿಯ ತಲೆಯನ್ನು ಮುಟ್ಟಿ ನೆಲದಮೇಲೆ ಕುಳಿತುಕೊಳ್ಳುವನು).

ನ್ಯಾಯಾಧಿಪತಿ—ನಿನ್ನ ವ್ಯವಹಾರವೇನು ?

ಶಕಾರ—(ಕೈಯನ್ನು ಮೇಲೆತ್ತಿ) ನಾನು ಅಷ್ಟು ದೊಡ್ಡದಾದ ಮದ್ಯದ ಪಾನಪಾತ್ರೆಯಂತಹ ಉತ್ತಮ ಕುಲದಲ್ಲಿ ಹುಟ್ಟಿದವನು. ನನ್ನ ಕುಲ ಬಲುದೊಡ್ಡದು. ನಮ್ಮಪ್ಪನು ದೊರೆಗೆ ಮಾವನಾಗಬೇಕು. ದೊರೆಯು ನಮ್ಮಪ್ಪನಿಗೆ ಅಳಿಯನಾಗಬೇಕು. ನಾನು ದೊರೆಗೆ ಭಾವ ಮೈದುನನಾಗಬೇಕು. ದೊರೆಯು ನನಗೆ ಅಕ್ಕನ ಗಂಡನಾಗಬೇಕು. ಇದನ್ನೆಲ್ಲಾ ಬಲ್ಲಿರೋ ?

ನ್ಯಾಯಾಧಿಪತಿ—ಬಲ್ಲೆ ಬಲ್ಲೆ. ಕುಲವನ್ನೂ ಸಂಬಂಧವನ್ನೂ ಕಟ್ಟಿಕೊಂಡೇನು ? ಮುಖ್ಯವಾಗಿ ಸ್ವಭಾವ ಒಳ್ಳೆಯದಾಗಿರಬೇಕು.

ಶಕಾರ—ನಮ್ಮ ಅಕ್ಕನ ಗಂಡನಾದ ಪಾಲಕಮಹಾರಾಜನು ಎಲ್ಲಾ ಉದ್ಯಾನವನಗಳಿಗಿಂತಲೂ ಶ್ರೇಷ್ಠವಾದ ಪುಷ್ಪಕರಂಡಕಜೀರ್ಣೋದ್ಯಾನವನ್ನು ಕ್ರೀಡಿಸುವುದಕ್ಕಾಗಿ ನನಗೆ ಕೊಟ್ಟಿರುವನು. ನಾನು ಅಲ್ಲಿರುವ ಗಿಡಗಳನ್ನು ಕಿತ್ತುಹಾಕುವುದಕ್ಕೂ ಒಣಗಿಸುವುದಕ್ಕೂ ನಿತ್ಯವೂ ಹೋಗುವುದುಂಟು. ಹೀಗಿರುವಾಗ ನೆನ್ನೆಯದಿನ ಸತ್ತುಹೋದ ಹೆಂಗಸಿನ ಶರೀರವೊಂದು ಅಲ್ಲಿ ಬಿದ್ದಿದ್ದಿತು. ನಾನು ಅದನ್ನು ಕಂಡೆನು, ಇಲ್ಲ. ಕಾಣಲಿಲ್ಲ.

ನ್ಯಾಯಾಧಿಪತಿ—ಅಲ್ಲಿ ಸತ್ತವಳ ಗುರುತನ್ನು ಬಲ್ಲೆಯೋ ?

ಶಕಾರ—ಅಯ್ಯಾ, ನಾನರಿಯೆನೆ ? ಹೆಚ್ಚಾಗಿ ಒಡವೆಗಳನ್ನಿಟ್ಟುಕೊಂಡು ಈ ಪಟ್ಟಣಕ್ಕೆಲ್ಲ ಅಲಂಕಾರಪ್ರಾಯಳಾಗಿದ್ದ ವಸಂತಸೇನೆ ಎಂಬುದನ್ನು ಚೆನ್ನಾಗಿ ಬಲ್ಲೆನು. ಅವಳನ್ನು ಯಾವನೋ ಒಬ್ಬ ದುಷ್ಟನು ಒಡವೆಯ ಆಸೆಯಿಂದ ವಿಜನವಾದ ನಮ್ಮ ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಕರೆದುಕೊಂಡು ಹೋಗಿ, ತನ್ನ ಬಾಹುಗಳಿಂದ ನುಲಿದು ಕೊಂದು ಹಾಕಿದನು. ನಾನಲ್ಲ. (ಎಂದು ಅಷ್ಟರಲ್ಲಿಯೇ ತನ್ನ ಬಾಯಿ ಮುಚ್ಚಿಕೊಳ್ಳುವನು).

ನ್ಯಾಯಾಧಿಪತಿ—(ಸ್ವಗತ) ಓಹೋ! ಇದು ನಗರರಕ್ಷಕರ ಅಜಾಗರೂಕತೆಯಿಂದುಂಟಾದುದು. (ಲೇಖಕನನ್ನು ಕುರಿತು) ಅಯ್ಯಾ, ಲೇಖಕನೇ, ನಾನಲ್ಲವೆಂದು ಈತನು ಹೇಳುವ ಮಾತನ್ನು ಮೊದಲು ಬರೆದುಕೊ.

ಲೇಖಕ—ಅಪ್ಪಣೆ. (ಎಂದು ಬರೆದುಕೊಳ್ಳುವನು).

ಶಕಾರ—(ಸ್ವಗತ) ಅಯ್ಯೋ! ನಾನಾಡಿದ ಮಾತು ನನ್ನ ಪ್ರಾಣಕ್ಕೇ ಬಂದಿತು. ಇರಲಿ. (ಪ್ರಕಾಶ) ಅಯ್ಯಾ, ನ್ಯಾಯಾಧಿಪತಿಗಳೇ, ನಾನಲ್ಲವೆಂದೇಕೆ ಹೇಳಲಿ? ನಾನೇ ಕಂಡೆನು ಏನು ಬಹಳ ಗದ್ದಲ ಮಾಡುವಿರಿ?

ನ್ಯಾಯಾಧಿಪತಿ—ದ್ರವ್ಯಕ್ಕಾಸೆಪಟ್ಟು ಅವಳ ಕೊರಲನ್ನು ಬಾಹು ಪಾಶಗಳಿಂದಲೇ ನುಲಿದನೆಂದು ನಿನಗೆ ಹೇಗೆ ತಿಳಿಯಿತು?

ಶಕಾರ—ಹಾರದ ನಡುನಡುವೆ ಕೆಲವು ಮುತ್ತುಗಳು ಒಡೆದು ಹೋಗಿದ್ದುವು. ಆದುದರಿಂದ ಊಹಿಸಿದೆನು.

ಲೇಖಕ—ಇದ್ದರೂ ಇರಬಹುದು.

ಶಕಾರ—ದೈವಾಧೀನದಿಂದ ಬದುಕಿದೆನು.

ನ್ಯಾಯಾಧಿಪತಿ—ಈ ವ್ಯವಹಾರವು ಯಾರಿಗೆ ಸಂಬಂಧಪಟ್ಟುದು?

ಲೇಖಕ—ಮುಖ್ಯವಾಗಿ ವಸಂತಸೇನೆಯ ತಾಯಿಗೆ ಸಂಬಂಧ ಪಟ್ಟುದು.

ನ್ಯಾಯಾಧಿಪತಿ—ಹಾಗಾದರೆ ಅವಳ ತಾಯನ್ನು ಕರೆಯಿಸಬೇಕಾಯಿತು.

ಲೇಖಕ—ಇದೊ, ಅವಳೇ ಬಂದಳು; ವಿಚಾರಿಸಬಹುದು.

(ವೃದ್ಧೆಯ ಪ್ರವೇಶ)

ವೃದ್ಧೆ—(ನ್ಯಾಯಾಧಿಪತಿಯನ್ನು ನೋಡಿ) ತಮಗೆ ಸುಖವಾಗಲಿ.

ಶಕಾರ—ಎಲೆ ಮುದಕಿ, ತಲೆಹಿಡಕಿ. ಬಂದೆಯೊ?

ನ್ಯಾಯಾಧಿಪತಿ—ನೀನೆಯೊ ವಸಂತಸೇನೆಯ ತಾಯಿ?

ವೃದ್ಧೆ—ಅಹುದು.

ನ್ಯಾಯಾಧಿಪತಿ—ಆದರೆ ಆ ವಸಂತಸೇನೆ ಈಗೆಲ್ಲಿ ಹೋದಳು?

ವೃದ್ಧೆ—ತನ್ನ ಪ್ರಿಯನ ಮನೆಗೆ ಹೋದಳು.

ನ್ಯಾಯಾಧಿಪತಿ—ಅವಳ ಪ್ರಿಯನ ಹೆಸರೇನು ?

ವೃದ್ಧೆ—ಆತನು ವರ್ತಕರ ಬೀದಿಯಲ್ಲಿ ವಾಸಮಾಡಿಕೊಂಡಿರುವನು. ಆರ್ಯಚಾರುದತ್ತನೆಂದು ಆತನ ಹೆಸರು.

ಶಕಾರ—ಕೇಳಿದಿರೊ ? ಈ ಮಾತನ್ನು ಬರೆದುಕೊಳ್ಳಿರಿ. ಆ ಚಾರುದತ್ತನಮೇಲೆಯೇ ನನ್ನ ವ್ಯವಹಾರ

ಲೇಖಕ—ಪ್ರಿಯನ ಮನೆಗೆಂದು ಹೇಳಿದುದರಿಂದ ಆತನಲ್ಲಿ ದೋಷವೇನೂ ಕಾಣುವುದಿಲ್ಲ.

ನ್ಯಾಯಾಧಿಪತಿ—ಚಾರುದತ್ತನನ್ನು ಕರೆಯಿಸಿ ವಿಚಾರಮಾಡಬೇಕು.

ಲೇಖಕ—ಅಹುದು. ಅವನ ಮನೆಯು ಸಮೀಪದಲ್ಲಿಯೇ ಇರುವುದು.

ನ್ಯಾಯಾಧಿಪತಿ—ಆತನನ್ನು ಕರೆಯಿಸು. ಅಯ್ಯಾ, ಧನದತ್ತನೆ, ವಸಂತಸೇನೆಯು ಚಾರುದತ್ತನ ಮನೆಗೆ ಹೋದಳೆಂಬುದನ್ನು ಬರೆದುಕೊ. ಇದೇ ವ್ಯವಹಾರಕ್ಕೆ ಮುಖ್ಯಸಾಧಕ. ಅಯ್ಯೋ ! ಆರ್ಯಚಾರುದತ್ತನನ್ನು ಇಲ್ಲಿಗೆ ಕರೆಯಿಸಬೇಕಾಯಿತಲ್ಲಾ ! ಅಥವಾ ನಾವು ಕರೆಯಿಸುವುದೇನು ? ವ್ಯವಹಾರವೇ ಆತನನ್ನು ಬರುವಂತೆ ಮಾಡುವುದು. ಅಯ್ಯಾ, ಶೋಧನಕನೆ, ನೀನು ಹೋಗಿ ಹೆಚ್ಚುಕಡಿಮೆ ಮಾತನಾಡದೆ ಆರ್ಯಚಾರುದತ್ತನನ್ನು ಮರ್ಯಾದೆಯಾಗಿ ಕರೆದುಕೊಂಡು ಬಾ. ನ್ಯಾಯಾಧಿಕಾರಿಗಳು ನಿನ್ನನ್ನು ನೋಡಬೇಕಂತೆ.—ಎಂದು ಹೇಳು. ಭಯಪಡಿಸಬೇಡ.

(ಶೋಧನಕನು ಚಾರುದತ್ತನನ್ನು ಕರೆತರಲು ಹೋಗುವನು.)

(ಸ್ಥಾನ—ಬೀದಿ.)

ಚಾರುದತ್ತ—(ಶೋಧನಕನೊಡನೆ ಬಂದು ಚಿಂತಿಸುತ್ತ) ನನ್ನ ಕುಲಶೀಲಗಳನ್ನೆಲ್ಲ ದೊರೆಯು ಚೆನ್ನಾಗಿ ಬಲ್ಲನು. ಆದರೂ ನನ್ನನ್ನು ಹೀಗೆ ಕರೆಯಿಸಬೇಕಾದರೆ ನನ್ನ ಗ್ರಹಚಾರಫಲವೇ ಸರಿ. ನಾನು ಆರ್ಯಕನ ಸಂಕಲೆಯನ್ನು ತೆಗೆದುಹಾಕಿ ನನ್ನ ರಥದಮೇಲೆಯೇ ಅವನನ್ನು ಕಳುಹಿಸಿದೆನು. ದೊರೆಯು ಆ ವೃತ್ತಾಂತವನ್ನೇನಾದರೂ ಚಾರರ ಮುಖದಿಂದ

ತಿಳಿದನೋ ಏನೋ! ಹೇಗಾದರೂ ಆಗಲಿ. ನ್ಯಾಯಸ್ಥಾನಕ್ಕೆ ಹೋಗುವೆನು. (ಪ್ರಕಾಶ) ಅಯ್ಯಾ, ಶೋಧನಕನೆ, ನ್ಯಾಯಸ್ಥಾನದ ಮಾರ್ಗವನ್ನು ತೋರಿಸು.

ಶೋಧನಕ—ಆರ್ಯನೆ, ದಯಮಾಡಬೇಕು. ದಯಮಾಡಬೇಕು.

ಚಾರುದತ್ತ—(ಭಯದಿಂದ) ಇದೇನು! ಈ ವಾಯಸವು ಕ್ರೂರವಾಗಿ ಕೂಗುತ್ತಿರುವುದು. ಈ ದೂತನು ತ್ವರೆಪಡಿಸುತ್ತಿರುವನು. ಎಡಗಣ್ಣು ಚಲಿಸುವುದು. ಎಲ್ಲವೂ ಅಪಶಕುನಗಳೇ.

ಶೋಧನಕ—ಆರ್ಯನೆ, ಜಾಗ್ರತೆಯಾಗಿ ದಯಮಾಡಬೇಕು.

ಚಾರುದತ್ತ—

ಕಂ || ಅಡಿಯಿಡೆ ಜಾರುಗುಮಿಳೆಯೊಳ |
ಗೆಡದೋಳುಂ ಪಾರ್ವುದಕಟ ವಾಯಸನಿಕರಂ ||
ಕಡುಕಠಿನರಾವಮೆಸಪುದು |
ನುಡಿವುದದೇಂ ಮೃತ್ಯುಸೂಚಕಂಗಳಿವೆಲ್ಲಂ ||

(ಎಂದು ಒಳಕ್ಕೆ ಹೋಗುತ್ತಾ) ಬರುವಾಗಲೇ ತಲೆ ಬೇರೆ ತಗುಲಿತು. ದೇವರು ಒಳ್ಳೆಯದನ್ನು ಮಾಡಬೇಕು.

ನ್ಯಾಯಾಧಿಪತಿ—ಓಹೋ! ಈತನೇ ಚಾರುದತ್ತನು. ಮನೋಹರವಾದ ಈತನ ಆಕಾರವನ್ನು ನೋಡಿದರೆ ಇಂತಹ ಅಕಾರ್ಯವನ್ನೆಂದಿಗೂ ಮಾಡಿರಲಾರನು. ಸೌಂದರ್ಯವಿದ್ದ ಕಡೆ ಸುಗುಣಗಳೇ ಇರುವುವು.

ಚಾರುದತ್ತ—ಅಯ್ಯಾ, ಅಧಿಕಾರಿಗಳೇ, ತಮಗೆ ಕ್ಷೇಮವೇ?

ನ್ಯಾಯಾಧಿಪತಿ—ಅಯ್ಯಾ, ಕ್ಷೇಮವೆ? ಈ ಪೀಠದಲ್ಲಿ ಕುಳಿತುಕೊ.

ಚಾರುದತ್ತ—(ಕುಳಿತುಕೊಳ್ಳುವನು)

ಶಕಾರ—(ಕೋಪದಿಂದ) ಎಲೋ, ಸ್ತ್ರೀಹತ್ಯಮಾಡಿದವನೆ, ಬಂದೆಯೋ? ಅಯ್ಯಾ, ನ್ಯಾಯಾಧಿಪತಿಗಳೆ, ವ್ಯವಹಾರವು ಒಳ್ಳೆಯ ನ್ಯಾಯವಾಯಿತು. ಒಳ್ಳೆಯ ಧರ್ಮವಾಯಿತು. ಈ ಸ್ತ್ರೀ ಘಾತುಕನು ಬಂದರೆ ಇವನಿಗೆ ಪೀಠವನ್ನು ಕೊಡುವಿರೋ? ಕೊಡಿಕೊಡಿ.

ನ್ಯಾಯಾಧಿಪತಿ—ಅಯ್ಯಾ, ಚಾರುದತ್ತನೆ, ಈಕೆಯ ಮಗಳೊಡನೆ ನಿನಗೆ ಪ್ರೀತಿಯಾಗಲಿ, ನಡತೆಯಾಗಲಿ ಉಂಟೋ?

ಚಾರುದತ್ತ—ಯಾರ ಮಗಳೊಡನೆ?

ನ್ಯಾಯಾಧಿಪತಿ—ಇದೊ, ಈಕೆಯ ಮಗಳೊಡನೆ. (ಎಂದು ವೃದ್ಧೆಯನ್ನು ತೋರಿಸುವನು)

ಚಾರುದತ್ತ—ಆರ್ಯೆ, ನಿನಗೆ ಕ್ಷೇಮವೆ?

ವೃದ್ಧೆ—ಅಯ್ಯಾ, ನಿನ್ನ ಕ್ಷೇಮವೇ ನನ್ನ ಕ್ಷೇಮ.

ನ್ಯಾಯಾಧಿಪತಿ—ಅಯ್ಯಾ, ಈ ವೇಶ್ಯೆಯ ಮಗಳು ನಿನಗೆ ಸಖಿಯೋ?

ಚಾರುದತ್ತ—(ತಲೆಯನ್ನು ತಗ್ಗಿಸುವನು)

ಶಕಾರ—ಅಯ್ಯಾ ನ್ಯಾಯಾಧಿಪತಿಗಳೆ, ನೋಡಿದಿರೋ? ದ್ರವ್ಯದ ಆಸೆಯಿಂದ ಆ ವಸಂತಸೇನೆಯನ್ನು ತಾನೇ ಕೊಂದು ಈಗ ನೀವು ವಿಚಾರಣೆಮಾಡಿದರೆ ಹೆದರಿಕೊಂಡು ನಾಚಿಕೆಯನ್ನು ನಟಿಸುತ್ತಾ ತನ್ನ ದೋಷವನ್ನು ಗೋಪನಮಾಡುವನು.

ಲೇಖಕ—ಅಯ್ಯಾ, ಲಜ್ಜೆಪಡಬೇಡ ಹೇಳು.

ಚಾರುದತ್ತ—(ನಾಚಿಕೆಯಿಂದ) ಅಯ್ಯಾ, ಅಧಿಕಾರಿಗಳೆ. ಈ ವೇಶ್ಯೆಯ ಮಗಳು ನನಗೆ ಸಖಿಯೆಂದು ನಾನು ಲಜ್ಜೆಯಿಲ್ಲದೆ ಹೇಗೆ ಹೇಳಿಕೊಳ್ಳಲಿ? ಏನೋ ಯವ್ವನ ಕೆಟ್ಟುದು. ಅಷ್ಟುಮಾತ್ರದಿಂದಲೇ ಸ್ವಭಾವಕ್ಕೇನೂ ಕುಂದಿಲ್ಲವಷ್ಟೆ?

ನ್ಯಾಯಾಧಿಪತಿ—ಅಯ್ಯಾ, ನಿಶ್ಚಯವಾಗಿ ಹೇಳು. ಈಗ ಲಜ್ಜೆಪಡಬಾರದು. ಇದು ವ್ಯವಹಾರಕಾಲವಲ್ಲವೇ?

ಚಾರುದತ್ತ—ಏನು! ವ್ಯವಹಾರವೆ? ಯಾರಸಂಗಡ.

ಶಕಾರ—(ಗರ್ವದಿಂದ) ನನ್ನ ಸಂಗಡ.

ಚಾರುದತ್ತ—ನಿನ್ನ ಸಂಗಡ ವ್ಯವಹರಿಸುವುದು ಬಹು ಕಷ್ಟ.

ಶಕಾರ—ಎಲಾ ಸ್ತ್ರೀ ಘಾತುಕನೆ, ಲೋಕೋತ್ತರಗಳಾದ ರತ್ನಾಭರಣಗಳನ್ನು ಧರಿಸಿದ್ದ ಆ ವಸಂತಸೇನೆಯನ್ನು ಕೊಂದು ಈಗ ಗುಟ್ಟುಮಾಡುವೆಯೋ?

ಚಾರುದತ್ತ—ನೀನು ಅಸಂಗತವಾಗಿ ಮಾತನಾಡುತ್ತಿಯೆ.

ನ್ಯಾಯಾಧಿಪತಿ—ಅಯ್ಯಾ, ಚಾರುದತ್ತನೆ, ಇವನ ಮಾತು ಹಾಗಿರಲಿ. ಈ ವೇಶ್ಯೆಯ ಮಗಳು ನಿನಗೆ ಸಖಿಯಹುದೋ ಅಲ್ಲವೋ?

ಚಾರುದತ್ತ—ಅಹುದು.

ನ್ಯಾಯಾಧಿಪತಿ—ಈಗ ಅವಳೆಲ್ಲಿ ?

ಚಾರುದತ್ತ—ಮನೆಗೆ ಹೋದಳು.

ಲೇಖಕ—ಹೇಗೆ ಹೋದಳು ? ಯಾವಾಗ ಹೋದಳು ? ಹೋಗುವಾಗ ಅವಳ ಸಂಗಡ ಯಾರಿದ್ದರು ?

ಚಾರುದತ್ತ—ಮನೆಗೆ ಹೋದಳು. ನಾನು ಇನ್ನೇನು ಹೇಳಲಿ ?

ಶಕಾರ—ಎಲೋ, ಧನಕ್ಕೆ ಆಸೆಪಟ್ಟು ವಸಂತಸೇನೆಯನ್ನು ನಮ್ಮ ಪುಷ್ಪಕರಂಡಕ ಜೀರ್ಣೋದ್ಯಾನದಲ್ಲಿ ನೀನೇ ಕೊಂದು, ಈಗ ಮನೆಗೆ ಹೋದಳೆಂದು ಬಗುಳುವೆಯೊ ?

ಚಾರುದತ್ತ—ಆಃ ! ಅಸಂಬದ್ಧಪ್ರಲಾಪಿಯೇ, ನಿನ್ನ ದೋಷವನ್ನೆಲ್ಲ ಮುಚ್ಚಿಕೊಂಡು ನನ್ನಮೇಲೆ ಅಸತ್ಯವನ್ನು ಹೇಳುವೆಯಾ? ಕಾಂತಿಹೀನವಾದ ನಿನ್ನ ಮುಖವೇ ನಿನ್ನ ದೋಷವನ್ನು ಹೇಳುವುದು.

ನ್ಯಾಯಾಧಿಪತಿ—(ಸ್ವಗತ) ಕೈಯಿಂದ ಪರ್ವತವನ್ನು ಎತ್ತುವುದಕ್ಕೆ ಹೇಗೆ ಆಗುವುದಿಲ್ಲವೋ ಹಾಗೆಯೇ ಈ ಚಾರುದತ್ತನ ಮೇಲೆ ದೋಷಾರೋಪಣೆಮಾಡುವುದಕ್ಕೂ ಆಗುವುದಿಲ್ಲ. ಈತನು ಆರ್ಯಚಾರುದತ್ತನಲ್ಲವೆ? ಇಂತಹ ಅಕಾರ್ಯವನ್ನು ಎಂದಿಗೆ ಮಾಡಿಯಾನು.

ಶಕಾರ—ಏನು ? ವ್ಯವಹಾರದಲ್ಲಿಯೂ ಪಕ್ಷಪಾತವುಂಟೋ ? ಆಗಲಿ ಆಗಲಿ.

ನ್ಯಾಯಾಧಿಪತಿ—ಚಿಃ ಮೂಢನೆ, ಹೋಗು. ಇಂತಹ ನಿರ್ದುಷ್ಟನಾದ ಪುರುಷನಲ್ಲಿ ದೋಷವನ್ನು ಹೇಳುವ ನಿನ್ನನ್ನು ಇನ್ನೂ ಭೂಮಿಯು ಹೊತ್ತಿರುವುದಲ್ಲಾ ! ತನ್ನ ಐಶ್ವರ್ಯವನ್ನೆಲ್ಲಾ ಪರರಿಗೋಸ್ಕರ ವಿನಿಯೋಗಿಸಿದ ಈ ಮಹಾನುಭಾವನು ಇತರರ ದ್ರವ್ಯಕ್ಕೆ ಆಸೆಪಟ್ಟು ಇಂತಹ ಅಕಾರ್ಯವನ್ನು ಮಾಡಾನೇ ?

ಶಕಾರ—ಇದೇ ಪಕ್ಷಪಾತ !

ವೃದ್ಧೆ—ಎಲಾ, ಪಾಪಿಯೆ, ಪೂರ್ವದಲ್ಲಿ ನಾವು ಕೊಟ್ಟಿದ್ದ ಒಡವೆಯನ್ನು ತನ್ನ ಮನೆಯಲ್ಲಿ ಕಳ್ಳರು ಕದ್ದುಕೊಂಡು ಹೋದರೆ ತಾನೇ ಉಪಯೋಗಿಸಿಕೊಂಡೆನೆಂದು ಹೇಳಿ ಲೋಕೋತ್ತರವಾದ

ರತ್ನಾವಳಿಯನ್ನು ಕೊಟ್ಟ ಈ ಸತ್ಯಸಂಧನು ಇಂತಹ ಕೆಟ್ಟಕೆಲಸವನ್ನು ಮಾಡಿಯಾನೇ? ಹಾ! ಪುತ್ರೀ! ಎಲ್ಲಿ ಹೋದೆ? (ಅಳುವಳು)

ನ್ಯಾಯಾಧಿಪತಿ—ಆರ್ಯ ಚಾರುದತ್ತನೆ, ವಸಂತಸೇನೆಯು ರಥದ ಮೇಲೆ ಹೋದಳೊ? ಅಥವಾ ನಡೆದುಕೊಂಡು ಹೋದಳೊ?

ಚಾರುದತ್ತ—ನನ್ನಿದಿರಾಗಿ ಹೋಗಲಿಲ್ಲ. ರಥದಮೇಲೆ ಹೋದಳೋ ಹೇಗೆ ಹೋದಳೋ ತಿಳಿಯದು.

ವೀರಕ—(ಬಂದು) ಬಂಧನದಿಂದ ತಪ್ಪಿಸಿಕೊಂಡ ಆರ್ಯಕನನ್ನು ನಾವು ಹುಡುಕುತ್ತಿದ್ದೆವಷ್ಟೆ? ಆಗ ಒಂದು ರಥ ಹೋಗುತ್ತಿದ್ದಿತು. ಅದನ್ನು ಚಂದನಕನು ಮೊದಲು ಶೋಧನೆಮಾಡಿದನು. ಆಮೇಲೆ ನಾನು ನೋಡಬೇಕೆಂದು ಹೇಳಿದುವಕ್ಕೆ ನನ್ನನ್ನು ಒದೆದು, ಬಯ್ದು ಅಪಮಾನ ಪಡಿಸಿದನು.

ನ್ಯಾಯಾಧಿಪತಿ—ಅಯ್ಯಾ, ಆ ರಥವಾವುದೋ ನೀನು ಬಲ್ಲೆಯಾ?

ವೀರಕ—ಇದು ಆರ್ಯಚಾರುದತ್ತನ ರಥ. ಇದರಲ್ಲಿ ವಸಂತಸೇನೆಯು ಕುಳಿತಿರುವಳು. ಕ್ರೀಡಿಸುವುದಕ್ಕಾಗಿ ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಹೋಗುವಳೆಂದು ಸಾರಥಿಯು ಹೇಳಿದನು.

ಶಕಾರ—ಈಗಲಾದರೂ ಕೇಳಿದಿರೋ?

ಭದ್ರಕ—ಆತುರದಿಂದ ನಮಸ್ಕಾರಮಾಡಿ ನಿಲ್ಲುವನು.

ನ್ಯಾಯಾಧಿಪತಿ—ಅಯ್ಯೋ? ಈ ನಿರ್ಮಲನಾದ ಚಂದ್ರನನ್ನು ರಾಹುವು ಗ್ರಾಸಮಾಡುವನಲ್ಲಾ! (ಪ್ರಕಾಶ) ಎಲೈ ವೀರಕನೆ, ನಿನ್ನ ನ್ಯಾಯವನ್ನು ಆಮೇಲೆ ವಿಚಾರಿಸುವೆನು. (ಎಂದು ಭದ್ರಕನನ್ನು ಕುರಿತು) ಮತ್ತೇನು ಸಮಾಚಾರ?

ಭದ್ರಕ—(ನಮಸ್ಕರಿಸಿ) ನಾನು ಪುಷ್ಪಕರಂಡಕ ಜೀರ್ಣೋದ್ಯಾನದ ಬಳಿಯ ಕಾವಲುಗಾರನು. ನೆನ್ನೆ ರಾತ್ರಿ ಕಾವಲಿಗೆ ಹೋಗಿದ್ದಾಗ ಅಲ್ಲಿ ಒಂದು ಸ್ತ್ರೀ ಶವವು ಬಿದ್ದಿದ್ದಿತು.

ಲೇಖಕ—ಸ್ತ್ರೀಯೆಂದು ನೀನು ಹೇಗೆ ತಿಳಿದುಕೊಂಡೆ?

ಭದ್ರಕ—ಆ ಮೃತಶರೀರದಲ್ಲಿ ಕೈ, ಕಾಲು, ತಲೆಯಲ್ಲಿ ಕೂದಲು,

ಇಷ್ಟುಮಾತ್ರ ಉಳಿದುಕೊಂಡಿದ್ದಿತು. ಅದರಿಂದ ಸ್ತ್ರೀಶವವೆಂದು ನಿಶ್ಚಯಿಸಿದೆನು.

ನ್ಯಾಯಾಧಿಪತಿ—(ಸ್ವಗತ) ಲೋಕದಲ್ಲಿ ನ್ಯಾಯವೊಂದನ್ನೇ ಅನುಸರಿಸಿ ಹೋಗುವುದು ಬಹುಕಷ್ಟ. ನಾವು ವಿಚಾರಣೆ ಮಾಡಿದಷ್ಟೂ ಸಂಕಟವೇ ಸಂಭವಿಸುವುದು. ಏನುಮಾಡೋಣ? ಅಯ್ಯಾ, ಚಾರುದತ್ತನೆ, ಸತ್ಯವಾಗಿ ಹೇಳು.

ಚಾರುದತ್ತ—ನಾನಿನ್ನೇನು ಹೇಳತಕ್ಕದ್ದು? ಯಾವನಾದರೂ ನಿರ್ದುಷ್ಟನಾದ ಪುರುಷನನ್ನು ಕೆಡಿಸಬೇಕೆಂದು ಮಾತ್ಸರ್ಯದಿಂದ ಅವನಲ್ಲಿ ಒಂದು ದೋಷವನ್ನು ಆರೋಪಿಸಿದರೆ ಅಧಿಕಾರಿಗಳು ಹಾಗೆಯೇ ನಡೆಯಿಸಬೇಕು. ಅದಕ್ಕೆ ವಿಚಾರಣೆಯೇ ಕೆಲಸವಿಲ್ಲ. ಅಯ್ಯೊ! ಲತೆಯನ್ನು ಬಾಗಿಸಿ ಹೂಗಳನ್ನು ಕೊಯ್ದರೆ ಅದು ಎಲ್ಲಿ ನೊಂದಿತೋ ಎಂದು ಯೋಚಿಸುವ ನಾನು ಅಂತಹ ಕೋಮಲಾಂಗಿಯನ್ನು ಕೊಂದೇನೆ?

ಶಕಾರ—ಅಯ್ಯಾ, ನೀವೇನೋ ಪಕ್ಷಪಾತಮಾಡುವ ಹಾಗೆ ಕಾಣುತ್ತದೆ. ಇನ್ನೂ ಇವನನ್ನು ಪೀಠದಿಂದ ಕೆಳಕ್ಕೆ ಇಳಿಸಲಿಲ್ಲ.

ನ್ಯಾಯಾಧಿಪತಿ—ಶೋಧನಕನೆ, ಈತನನ್ನು ಪೀಠದಿಂದ ಎಬ್ಬಿಸು.

ಶೋಧನಕ—(ಎಬ್ಬಿಸುವನು)

ಚಾರುದತ್ತ—(ಎದ್ದು) ಅಯ್ಯಾ, ಅಧಿಕಾರಿಗಳೆ, ವಿಚಾರಣೆ ಮಾಡಿ ಮಾಡಿ. ನೆಲದಮೇಲೆ (ಕುಳಿತುಕೊಳ್ಳುವನು).

ಶಕಾರ—(ಸ್ವಗತ ಸಂತೋಷದಿಂದ ಕುಣಿದು) ನಾನು ಮಾಡಿದ ಪಾಪ ಈಗ ಮತ್ತೊಬ್ಬನಮೇಲೆ ಬಿದ್ದಿತು. ಆದುದರಿಂದ ಈ ಚಾರುದತ್ತನು ಕುಳಿತಿದ್ದ ಸ್ಥಳದಲ್ಲಿ ಕುಳಿತುಕೊಳ್ಳುವೆನು. (ಕುಳಿತು) ಎಲೋ, ಚಾರುದತ್ತ, ನನ್ನನ್ನು ನೋಡು. ನಾನೆಲ್ಲಿ ಕುಳಿತಿರುವೆನು? ಈಗಲಾದರೂ ನಾನೇ ಕೊಂದೆನೆಂದು ಹೇಳು.

ಚಾರುದತ್ತ—(ನಿಟ್ಟುಸಿರು ಬಿಟ್ಟು ಸ್ವಗತ) ಹಾ! ಮೈತ್ರೇಯನೆ, ಹಾ! ಬ್ರಾಹ್ಮಣಿಯೆ! ಅಯ್ಯೋ! ಮಗುವೆ! ರೋಹಸೇನನೆ! ಈಗ ನನಗೆ ಬಂದಿರುವ ವಿಪತ್ತನ್ನು ನೋಡದೆ ಎಲ್ಲೋ ಇರುವಿರಲ್ಲಾ! ನಮ್ಮ ಮಗುವಿಗೆ ಚಿನ್ನದ ಬಂಡಿಯನ್ನು ಮಾಡಿಸಿ ಕೊಡುವುದಕ್ಕೋಸ್ಕರ ಆ ವಸಂತ

ಸೇನೆಯು ಕೊಟ್ಟ ಒಡವೆಗಳನ್ನು ಅವಳಿಗೆ ಕೊಟ್ಟು ಬಾರೆಂದು ಮೈತ್ರೇಯನಿಗೆ ಹೇಳಿ ಕಳುಹಿಸಿದ್ದೆನು. ಅವನೇಕೋ ಇನ್ನೂ ಬರಲಿಲ್ಲ.

ವಿದೂಷಕ—(ಒಡವೆಗಳನ್ನು ತೆಗೆದುಕೊಂಡು ಬಂದು) ವಸಂತಸೇನೆಯು ಚಿನ್ನದ ಬಂಡಿಗಾಗಿ ನಮ್ಮ ರೋಹಸೇನನಿಗೆ ಕೊಟ್ಟಿದ್ದ ಒಡವೆಗಳನ್ನು ಅವಳಿಗೆ ಕೊಟ್ಟು ಬಾರೆಂದು ಚಾರುದತ್ತನು ನನಗೆ ಆಜ್ಞಾಪಿಸಿದಂತೆ ನಾನು ವಸಂತಸೇನೆಯ ಮನೆಗೆ ಹೋಗುವಷ್ಟರಲ್ಲಿ ಚಾರುದತ್ತನನ್ನು ನ್ಯಾಯಸ್ಥಾನಕ್ಕೆ ಹಿಡಿದುಕೊಂಡು ಹೋದರೆಂಬ ಮಾತು ತಿಳಿದು ಇಲ್ಲಿಗೇ ಬಂದೆನು. ಎಲ್ಲಿ? ಚಾರುದತ್ತನೆಲ್ಲಿ? ಅಯ್ಯಾ, ಅಧಿಕಾರಿಗಳೆ, ಕ್ಷೇಮವೇ, ನನ್ನ ಪ್ರಿಯಮಿತ್ರನೆಲ್ಲಿ?

ನ್ಯಾಯಾಧಿಪತಿ—ಇದೋ, ಇಲ್ಲಿ.

ವಿದೂಷಕ—ಮಿತ್ರನೆ, ನಿನಗೆ ಸುಖವೇ?

ಚಾರುದತ್ತ—ಆಗಬಹುದು.

ವಿದೂಷಕ—ಕ್ಷೇಮವೆ?

ಚಾರುದತ್ತ—ಅದೂ ಆಗಬಹುದು.

ವಿದೂಷಕ—ಮಿತ್ರ, ನೀನೇನು ಬಹು ಖಿನ್ನನಾಗಿರುವಂತೆ ಕಾಣಿಸುವೆ? ನ್ಯಾಯಾಧಿಪತಿಗಳು ನಿನ್ನನ್ನೇಕೆ ಕರೆಯಿಸಿದರು?

ಚಾರುದತ್ತ—ಸಖನೆ, ಪಾಪಿಯಾದ ನಾನು ಪರಲೋಕವನ್ನೂ ಗಣಿಸದೆ ರತಿದೇವಿಯಂತಿದ್ದ ಸ್ತ್ರೀಯನ್ನು—ಮುಂದಕ್ಕೆ ಇವನೇ ಹೇಳುವನು.

ವಿದೂಷಕ—ಅದೇನದೇನು?

ಚಾರುದತ್ತ—(ಕಿವಿಯಲ್ಲಿ ಹೇಳುವನು)

ವಿದೂಷಕ—ಹೀಗೆ ಹೇಳಿದವನಾರು?

ಚಾರುದತ್ತ—(ಶಕಾರನನ್ನು ತೋರಿಸಿ) ಇವನು ಅಥವಾ, ದೈವವೇ ಹಾಗೆ ಹೇಳಿಸುತ್ತಿರುವುದು.

ವಿದೂಷಕ—(ಮರೆಯಾಗಿ) ಮನೆಗೆ ಹೋದಳೆಂದು ಏಕೆ ಹೇಳಲಿಲ್ಲ?

ಚಾರುದತ್ತ—ಹೇಳಿದೆನಾದರೂ ನಮ್ಮ ಗ್ರಹಚಾರವಶದಿಂದ ಅಧಿಕಾರಿಗಳು ಅದನ್ನು ನಿಶ್ಚಯವೆಂದು ನಂಬುವುದಿಲ್ಲ.

ವಿದೂಷಕ—ಯಾವ ಪುರುಷನು ಈ ಉಜ್ಜಯಿನೀ ಪಟ್ಟಣಕ್ಕೆ ಅಲಂಕಾರವಾಗಿರುವನೋ ಅಂತಹ ಗುಣಶಾಲಿಯು ದ್ರವ್ಯಕ್ಕೆ ಆಸೆಪಟ್ಟು ಇಂತಹ ಅಕಾರ್ಯವನ್ನು ಎಂದಿಗಾದರೂ ಮಾಡಿಯಾನೆ? (ಶಕಾರನನ್ನು ನೋಡಿ ಕೋಪದಿಂದ) ಎಲಾ, ನೀಚನೆ, ರಾಜಶ್ಯಾಲಕನೇ, ಕುಲಟಾಪುತ್ರನೆ, ಕೃತಘ್ನನೆ, ದುರಹಂಕಾರಿಯೇ, ಇಂತಹ ಲೋಕವಿರುದ್ಧವಾದ ಕಾರ್ಯವನ್ನು ನನ್ನ ಮಿತ್ರನು ಮಾಡಿದನೆಂದು ಹೇಳಿದೆಯಾ? ಈಗ ನನ್ನ ಮುಂದೆ ಹೇಳು. ನೋಡು, ನಿನ್ನ ಹೃದಯದಂತೆ ವಕ್ರವಾಗಿರುವ ಈ ದಂಡಕಾಷ್ಠದಿಂದ ನಿನ್ನ ತಲೆಯನ್ನು ಪುಡಿ ಪುಡಿ ಮಾಡುವೆನು.

ಶಕಾರ—(ಕೋಪದಿಂದ) ಅಯ್ಯಾ, ನೋಡಿನೋಡಿ. ಚಾರುದತ್ತ ನಿಗೂ ನನಗೂ ವ್ಯವಹಾರ; ಕಲಹ; ಜಗಳ; ಆದರೆ ಈ ಕಾಗೆ ಕಾಲ ಜುಟ್ಟಿನ ತಲೆಯವನು ನನ್ನ ತಲೆಯನ್ನು ಪುಡಿಮಾಡುವುದಕ್ಕೆ ಕಾರಣವೇನು? (ವಿದೂಷಕನನ್ನು ಕುರಿತು) ಎಲೋ, ತಲೆಹೋಕ, ಬೇಡಬೇಡ.

ವಿದೂಷಕ—(ಕೋಪದಿಂದ) ಎಲೋ, ನೀಚ, ಅನ್ಯಾಯವಾಗಿ ಹೇಳುವೆಯಾ? ಇರಲಿ, ನಿನ್ನ ತಲೆಯನ್ನು ಹೊಡೆದುಹಾಕುವೆನು. (ಇಬ್ಬರೂ ಹೊಡೆದಾಡುವರು, ವಿದೂಷಕನ ಕಂಕುಳಲ್ಲಿದ್ದ ಒಡವೆಯ ಗಂಟು ಕೆಳಕ್ಕೆ ಬೀಳುವುದು. ಶಕಾರನು ತೆಗೆದುಕೊಳ್ಳುವನು).

ಶಕಾರ—ಅಯ್ಯಾ, ನೋಡಿನೋಡಿ. ಇವೇ ಆ ವಸಂತಸೇನೆಯ ಆಭರಣಗಳು. ಇದಕ್ಕೋಸ್ಕರವಾಗಿಯೇ ಅವಳನ್ನು ಇವನು ಕೊಂದುದು.

ಅಧಿಕಾರಿ—(ತಲೆ ಬಾಗಿಸುವನು)

ಚಾರುದತ್ತ—ಈ ಆಭರಣಗಳು ನಮ್ಮ ದುರದೃಷ್ಟದಿಂದ ಇಂತಹ ಸಮಯದಲ್ಲಿ ಇಲ್ಲಿಗೆ ಬರಬಹುದೇ!

ವಿದೂಷಕ—ಆದರೇನು? ಇದು ಬಂದ ಸಂಗತಿಯನ್ನು ಹೇಳು.

ಚಾರುದತ್ತ—ನಾವು ಎಷ್ಟುಹೇಳಿದರೂ ನ್ಯಾಯಾಧಿಪತಿಗಳು ನಿಶ್ಚಯವೆಂದು ನಂಬುವಹಾಗಿಲ್ಲ. ಇದರಮೇಲೂ ನಮ್ಮ ದೈನ್ಯವನ್ನು ತೋರಿಸುವುದಕ್ಕಿಂತ ಸಾಯುವುದೇ ಲೇಸು.

ನ್ಯಾಯಾಧಿಪತಿ—(ಸ್ವಗತ) ಅಯ್ಯೋ, ಇದು ಬೇರೆ ಒಂದು ಧೂಮಕೇತು ಹುಟ್ಟಿತಲ್ಲಾ!

ಲೇಖಕ—(ವೃದ್ಧೆಯನ್ನು ಕುರಿತು) ಆರ್ಯೆ, ಈ ಒಡವೆಗಳನ್ನು ನೋಡು. ನಿನ್ನ ಮಗಳದು ಅಹುದೋ ಅಲ್ಲವೊ?

ವೃದ್ಧೆ—ನೋಡಿ ಅವುಗಳಂತೆಯೇ ಇವೆ. ಆದರೆ ಆ ಒಡವೆಗಳಲ್ಲ.

ಶಕಾರ—ಆಃ! ತಲೆಹಿಡಿಕಿ! ಕಣ್ಣಿಂದಮಾತ್ರ ನೋಡುವೆಯಲ್ಲಾ, ಬಾಯಿಂದ ಬೊಗುಳುವುದಕ್ಕೇನು?

ವೃದ್ಧೆ—ಚಿಃ! ಹೋಗು.

ಲೇಖಕ—ಚೆನ್ನಾಗಿ ನೋಡಿ ಹೇಳು. ಅದೇ ಅಹುದೋ ಅಲ್ಲವೋ?

ವೃದ್ಧೆ—ಇದನ್ನು ಮಾಡಿದ ಶಿಲ್ಪಿಯು, ಬುದ್ಧಿಕೌಶಲದಿಂದ ಅದರಂತೆಯೇ ಮಾಡಿರುವನು. ಆ ಒಡವೆಗಳು ಬೇರೆ ಅಲ್ಲ.

ನ್ಯಾಯಾಧಿಪತಿ—ಆರ್ಯೆ, ಈ ಒಡವೆಗಳನ್ನು ಬಲ್ಲೆಯೋ?

ವೃದ್ಧೆ—ನಾನರಿಯೆನು. ನನಗೆ ತಿಳಿಯದಂತೆ ಆ ವಸಂತಸೇನೆಯೇನಾದರೂ ಮಾಡಿಸಿದ್ದಳೋ ಏನೋ?

ನ್ಯಾಯಾಧಿಪತಿ—ಒಂದೊಡವೆಯನ್ನು ನೋಡಿ ಶಿಲ್ಪಿಗಳು ಮತ್ತೊಂದು ಒಡವೆಯನ್ನು ಅದರಂತೆಯೇ ಮಾಡುವುದುಂಟು. ಲೋಕದಲ್ಲಿ ಅದೂ ಸಹಜವೇ.

ಲೇಖಕ—ಇದು ಚಾರುದತ್ತನದು.

ಚಾರುದತ್ತ—ಅಲ್ಲ ಅಲ್ಲ.

ಲೇಖಕ—ಆದರೆ ಯಾರದು?

ಚಾರುದತ್ತ—ಇದೊ ಈಕೆಯ ಮಗಳದು.

ಲೇಖಕ—ಆಕೆಯ ಒಡವೆ ಇಲ್ಲಿಗೇಕೆ ಬಂದಿತು?

ಚಾರುದತ್ತ—ವಸಂತಸೇನೆಯು ರೋಹಸೇನನಿಗಾಗಿ ಕೊಟ್ಟಿದ್ದಳು.

ಲೇಖಕ—ಅಯ್ಯಾ, ಸತ್ಯವಾಗಿ ಹೇಳು. ಸತ್ಯವನ್ನು ಹೇಳಿದವನಿಗೆ ಪಾತಿತ್ಯವಿಲ್ಲ.

ಚಾರುದತ್ತ—ನನಗೆ ಇನ್ನಾವ ವಿಷಯವೂ ತಿಳಿಯದು. ಅಂತೂ ಈ ಆಭರಣಗಳು ನಮ್ಮ ಮನೆಯಿಂದ ಬಂದುವು.

ಶಕಾರ—ಎಲೋ, ವಸಂತಸೇನೆಯನ್ನು ನೀನೇ ಆ ಉದ್ಯಾನವನದಲ್ಲಿ ಕೊಂದು ಈಗ ತಪ್ಪಿಸಿಕೊಳ್ಳುವೆಯೋ?

ನ್ಯಾಯಾಧಿಪತಿ—ಅಯ್ಯಾ, ಚಾರುದತ್ತನೆ, ಸತ್ಯವಾಗಿ ಹೇಳು. ಇಲ್ಲದಿದ್ದರೆ ಈ ಸುಕುಮಾರವಾದ ನಿನ್ನ ದೇಹವು ಚಾವಟಿಯಿಂದ ಹೊಡೆಯಿಸಲ್ಪಡಬೇಕಾದೀತು.

ಚಾರುದತ್ತ—ಸತ್ಕುಲಪ್ರಸೂತನಾದ ನಾನು ಪಾಪವನ್ನು ಬೇರೆ ಮಾಡಲಿಲ್ಲ. ನನ್ನನ್ನು ನೀವು ಪಾಪಿ ಎಂದು ಊಹಿಸುವ ಪಕ್ಷದಲ್ಲಿ ನಾನು ಪಾಪಿಯಲ್ಲದಿದ್ದರೆತಾನೆ ಫಲವೇನು ? (ಸ್ವಗತ) ಅಯ್ಯೋ, ವಸಂತ ಸೇನೆಯು ಇಲ್ಲದಿದ್ದಮೇಲೆ ನಾನು ಬದುಕಿ ಪ್ರಯೋಜನವೇನು? (ಪ್ರಕಾಶ) ಅಯ್ಯಾ, ಬಹಳವಾಗಿ ಹೇಳಿ ಏನು ಫಲ. ನೀಚನಾದ ನಾನು, ಇಹ ಪರ ಲೋಕಗಳ ಜ್ಞಾನವು ಕೂಡಾ ಇಲ್ಲದೆ ರತಿಸಮಾನಳಾದ ಸ್ತ್ರೀಯನ್ನು—ಮುಂದಕ್ಕೆ ಇವನೇ ಹೇಳುವನು.

ಶಕಾರ—ಕೊಂದೆನು–ಎಲೋ, ನಾನೇ ಕೊಂದೆನೆಂದು ನಿನ್ನ ಬಾಯಿಂದಲೇ ಹೇಳೋ.

ಚಾರುದತ್ತ—ನೀನೇ ಹೇಳಿದೆಯಲ್ಲಾ.

ಶಕಾರ—ಅಯ್ಯಾ, ಕೇಳಿಕೇಳಿ. ಇವನೇ ಅವಳನ್ನು ಕೊಂದವನು. ಈಗ ಸಂಶಯು ಪರಿಹಾರವಾಯಿತೇ? ಇನ್ನಾದರೂ ಈ ದರಿದ್ರನಿಗೆ ಶಿಕ್ಷೆಮಾಡಿ.

ನ್ಯಾಯಾಧಿಪತಿ—ಅಯ್ಯಾ. ರಾಜಪುರುಷರೆ, ಈ ಶಕಾರನು ಹೇಳುವ ಪ್ರಕಾರ ಈ ಚಾರುದತ್ತನನ್ನು ಹಿಡಿದುಕೊಳ್ಳಿರಿ.

ರಾಜಪುರುಷರು—(ಚಾರುದತ್ತನನ್ನು ಹಿಡಿದುಕೊಳ್ಳುವರು).

ನ್ಯಾಯಾಧಿಪತಿ—ಅಯ್ಯಾ, ಚಾರುದತ್ತನೆ, ವಿಚಾರಣೆಮಾಡಿ ನಿರ್ಣಯಿಸುವುದು ಮಾತ್ರವೇ ನಮ್ಮ ಅಧಿಕಾರದಲ್ಲಿದೆ. ಇಲ್ಲಿಂದ ಮುಂದಕ್ಕೆ ರಾಜನ ಅಪ್ಪಣೆಯಾದಂತೆ ನಡೆಯಿಸಬೇಕು. ಶೋಧನಕನೆ, ಈತನು ಬ್ರಾಹ್ಮಣನು. ಪಾತಕಿಯಾಗಿದ್ದರೂ ಕೊಲ್ಲಕೂಡದು. ಅವನ ದ್ರವ್ಯವನ್ನೆಲ್ಲಾ ತೆಗೆದುಕೊಂಡು, ದೇಶಭ್ರಷ್ಟತೆಯನ್ನು ವಿಧಿಸಬೇಕೆಂದು ಮನುಸ್ಮೃತಿಯಲ್ಲಿ ಹೇಳಿರುವುದಾಗಿ ನನ್ನ ವಿಜ್ಞಾಪನೆಯನ್ನು ಪಾಲಕಮಹಾರಾಜನಿಗೆ ತಿಳಿಸು.

ವೃದ್ಧೆ—ಅಯ್ಯಾ, ಕ್ಷಮಿಸಿ ಕ್ಷಮಿಸಿ: ಈತನು ನನ್ನ ಮಗಳನ್ನು ಕೊಂದಿದ್ದರೂ ಚಿಂತೆಯಿಲ್ಲ. ಈತನನ್ನು ಬಿಟ್ಟುಬಿಡಿರಿ. ಕಕ್ಷಿ ಪ್ರತಿಕಕ್ಷಿಗಳಿಗಲ್ಲವೇ ವ್ಯವಹಾರವೆನ್ನುವುದು ? ನಾನು ಕಕ್ಷಿ, ನಾನು ಹೇಳುವೆನು, ಈತನನ್ನು ಬಿಟ್ಟುಬಿಡಿ.

ಶಕಾರ—ಹೊಲಮುಂಡೆ, ಇದರಿಂದ ನಿನಗೇನು ಹೋಗು.

ನ್ಯಾಯಾಧಿಪತಿ—ಪೂಜ್ಯಳೆ, ಸುಮ್ಮನೆ ನೀನು ಹೊರಟುಹೋಗು. ಅಯ್ಯಾ, ಇವಳನ್ನು ಹೊರಕ್ಕೆ ಕಳುಹಿಸಿ.

ವೃದ್ಧೆ—ಹಾ ! ಮಹಾತ್ಮನೆ ! ಚಾರುದತ್ತನೆ ! (ಎಂದು ಅಳುತ್ತಾ ಹೋಗುವಳು).

ಶಕಾರ—(ಸ್ವಗತ) ಇವನಿಗೆ ತಕ್ಕುದನ್ನು ಮಾಡಿಸಿದುದಾಯಿತು. ಇನ್ನು ಹೋಗುವೆನು. (ಹೊರಟುಹೋಗುವನು).

ಶೋಧನಕ—(ಬಂದು) ಅಯ್ಯಾ, ಹೋಗಿದ್ದೆನು. ಯಾವ ಒಡವೆಗಾಗಿ ಚಾರುದತ್ತನು ವಸಂತಸೇನೆಯನ್ನು ಕೊಂದನೋ, ಅದೇ ಒಡವೆಗಳನ್ನು ಅವನ ಕತ್ತಿಗೆ ಕಟ್ಟಿಸಿ ಇವನು ಇಂತಹ ಅಪರಾಧ ಮಾಡಿದುದರಿಂದ ಶೂಲಕ್ಕೆ ಹಾಕಲ್ಪಡುವನು. ಇನ್ನುಮೇಲೆ ಹೀಗೆ ಅಪರಾಧವನ್ನು ಯಾರಾದರೂ ಮಾಡಿದರೆ ಅವರಿಗೂ ಇದೇ ಶಿಕ್ಷೆಯಾಗುವುದೆಂಬದಾಗಿ ಪಾಲಕಮಹಾರಾಜನ ಅಪ್ಪಣೆ ಆಗಿರುವುದು—ಎಂದು ಬೀದಿಬೀದಿಯಲ್ಲಿಯೂ ಸಾರಿಸಿ, ದಕ್ಷಿಣ ಶ್ಮಶಾನಕ್ಕೆ ಕರೆದುಕೊಂಡು ಹೋಗಿ, ಶೂಲಕ್ಕೆ ಹಾಕಿಸಿಬಿಡಿ—ಎಂದು ಅಪ್ಪಣೆಯಾಯಿತು.

ನ್ಯಾಯಾಧಿಪತಿ—ರಾಜಾಜ್ಞೆಯಂತೆ ಈತನನ್ನು ವಧಕರ ವಶಕ್ಕೆ ಕೊಡತಕ್ಕುದು.

ಚಾರುದತ್ತ—ರಾಜನೂ ಕೂಡ ವಿಮರ್ಶೆಮಾಡದೆ ಹೀಗೆ ಆಜ್ಞಾಪಿಸಿದನೆ ? ಅಯ್ಯೋ ! ಲೋಕದಲ್ಲಿ ನ್ಯಾಯಾನ್ಯಾಯಗಳನ್ನು ವಿಚಾರಣೆ ಮಾಡದೆ ಅಧಿಕಾರಿಗಳು ಪಾತಿತ್ಯಕ್ಕೆ ಗುರಿಯಾಗುವರು. ಆದರಂತೆ ಅವಿಮರ್ಶಕಾರಿಯಾದ ದೊರೆಯೂ ಪಾತಕಕ್ಕೆ ಗುರಿಯಾಗುವನು. (ವಿದೂಷಕನನ್ನು ಕುರಿತು) ಅಯ್ಯಾ, ಮೈತ್ರೇಯನೆ, ನೀನು ನಮ್ಮ ತಾಯಬಳಿಗೆ ಹೋಗಿ ಚಾರುದತ್ತನು ನಿಮಗೆ ನಮಸ್ಕರಿಸಿದನು. ಇದೇ ಕಡೆಯ ನಮ

ಸ್ಕಾರವೆಂದು ಆಕೆಗೆ ತಿಳಿಸು. ನಮ್ಮ ರೋಹಸೇನನನ್ನು ಮಾತ್ರ ಚೆನ್ನಾಗಿ ಕಾಪಾಡು.

ವಿದೂಷಕ—ಬುಡವನ್ನೇ ಕಡಿದಬಳಿಕ, ಗಿಡವನ್ನು ಏಕೆ ಸಂರಕ್ಷಿಸ ಬೇಕು ?

ಚಾರುದತ್ತ—ಅಯ್ಯಾ, ಹಾಗೆನ್ನಬೇಡ. ಪರಲೋಕವನ್ನು ಹೊಂದಿ ದವರಿಗೆ ಮಕ್ಕಳೇ ಪ್ರತಿಬಿಂಬಗಳು. ಆದುದರಿಂದ ನನ್ನಲ್ಲಿರುವ ಪ್ರೀತಿ ಯನ್ನೇ ನಮ್ಮ ರೋಹಸೇನನಲ್ಲಿಯೂ ಇಡು.

ವಿದೂಷಕ—ಮಿತ್ರನೆ, ನಿನಗೆ ನಾನು ಸ್ನೇಹಿತನಾಗಿದ್ದು ನಿನ್ನನ್ನು ಬಿಟ್ಟು ನಾನು ಮಾತ್ರ ಬದುಕಿರಲೇ ?

ಚಾರುದತ್ತ—ಈಗ ನನಗೆ ರೋಹಸೇನನ ಮುಖವನ್ನು ತೋರಿಸು.

ವಿದೂಷಕ—ಆಗಲಿ ; (ಹೋಗುವನು.)

ಚಾರುದತ್ತ—(ಆಕಾಶವನ್ನು ನೋಡಿ) ರಾಜನೆ, ಅಪರಾಧಿಯ ದೋಷವನ್ನು ನಿರ್ಣಯಿಸುವುದಕ್ಕೆ ವಿಷಪರೀಕ್ಷೆ, ಅಗ್ನಿಪರೀಕ್ಷೆ, ಮೊದ ಲಾದ ಅನೇಕೋಪಾಯಗಳಿದ್ದರೂ, ಯಾವುದನ್ನೂ ಮಾಡದೆ ಒಬ್ಬ ದುಷ್ಟನ ಮಾತಿನಿಂದಲೇ ಬ್ರಾಹ್ಮಣನಾದ ನನಗೆ ಹೀಗೆ ಪ್ರಾಣಾಂತ ಶಿಕ್ಷೆಯನ್ನು ವಿಧಿಸಿದುದರಿಂದ ನೀನು ಪುತ್ರಪೌತ್ರ ಸಮೇತನಾಗಿ ನರಕಾನು ಭವವನ್ನು ಮಾಡು. ಇದೊ, ಬಂದೆ, ಬಂದೆ,

ರಾಗ ॥ ಜಾವೇರಿ ॥ ತಾಳ ॥

ಹತಭಾಗ್ಯನು ನಾನಾದೆನೆ । ಗತಿಯೇ ನಿನ್ನಾರು ಪೊರೆಯುವರು ॥ಪ॥
ಕ್ಷಿತಿಯಾಳ್ವಿಕೆ ಲೇಸಹುದೆ । ಮತಿಹೀನರು ರಾಜರಾಗೆಮಿಗೆ ॥ಅ।ಪ॥
ಪಳಿವುನಿಂದೆ ಕಪಟಪಾತಕ ವನ್ನತ ದುರಾಚಾರ ಮಪಕೃತಿ ಕೊಲೆಗುಂ ।
ನೆಲೆಯಾದ ನರಾಧಮನ ಪ್ರಜೆಗಳ್ಗೆ ವಿನಾಶವೆ ನಿಜವು ॥೧॥

(ಎಂದೆಲ್ಲರೂ ಹೋಗುವರು.)

ಇದು

ವ್ಯವಹಾರವೆಂಬ ಒಂಭತ್ತನೆಯಂಕಂ

———

# ಹತ್ತನೆಯಂಕಂ.

---

(ಸ್ಥಾನ—ರಾಜಮಾರ್ಗ.)

(ಇಬ್ಬರು ಚಂಡಾಲರು ಚಾರುದತ್ತನೊಡನೆ ಪ್ರವೇಶಿಸುವರು).

ಆಹಿಂತಕ—ಅಯ್ಯಾ ದಾರಿಬಿಡಿ! ದಾರಿಬಿಡಿ! ಈತ ನೇಆರ್ಯ ಚಾರುದತ್ತನು. ಈತನ ಕೊರಳಿಗೆ ಕೆಂಪುಕಣಗಿಲೆ ಹೂವಿನ ಮಾಲಿಕೆಯನ್ನು ಹಾಕಿ ಕೊಲ್ಲುವುದಕ್ಕಾಗಿ ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುತ್ತಿರುವೆವು. ಇನ್ನೇನು? ಎಣ್ಣೆ ಕಡಮೆಯಾದ ದೀಪದಂತೆ ಸ್ವಲ್ಪಕಾಲದಲ್ಲೇ ಮರಣ ವನ್ನು ಹೊಂದುವನು.

ಗೋಹ—ಎಲೋ, ಇದೇನು ಮೇಲಿನಿಂದ ನೀರು ಬೀಳುತ್ತಿರು ವುದು? ಈ ಪಟ್ಟಣಕ್ಕೆಲ್ಲ ಅಲಂಕಾರಪ್ರಾಯನಾಗಿದ್ದ ಚಾರುದತ್ತನನ್ನು ಅನ್ಯಾಯವಾಗಿ ಕೊಲ್ಲುವರೆಂದು ಆಕಾಶವೇ ಅಳುವುದೋ ಏನೊ!

ಆಹಿಂತಕ—ಎಲೋ, ಅಳುತ್ತಿರುವುದು ಆಕಾಶವಲ್ಲ; ಸ್ತ್ರೀಯರು ಉಪ್ಪರಿಗೆಯಲ್ಲಿ ಕುಳಿತು ಈತನಿಗೆ ಪ್ರಾಪ್ತವಾದ ದುರ್ದಸೆಗಾಗಿ ನಿಟ್ಟು ಸಿರು ಬಿಡುತ್ತಾ ಕಣ್ಣೀರು ಸುರಿಸುತ್ತಿರುವರು;

ಕಂ ॥ ತೊಳಗುವ ಗವಾಕ್ಷರಾಜಿಯಿ ।
ನಳಿಚಿಕುರೆಯರ್ಕೈದೆ ಚಾರುದತ್ತನ ಗತಿಯಂ ।
ಸಲೆ ನಿರುಕಿಸಿ ಕಣ್ಣೀರ್ಗರೆ ।
ದಳುತಿರ ಲಂಬರವೆ ರೋದಿಪಂತಿರೆ ತೋರ್ಕುಂ ॥

ರಾಗ ॥ ಜುಂಜೋಟಿ ॥

ಚಾರುದತ್ತ—

ಸಹಿಪೆನಿದನೆಂತು ಹಾ । ದಹಿಸುವೀಶೋಕವಂ ॥ಪ॥
ಕಾಗೆಗಳು ನನ್ನನೋಡಿ ಬಲಿಯೆನುತ ಕೂಗುತಬರ್ಪುವು ಹಾ ಹಾ ॥
ಮೈಯೊಳು ರಕ್ತಗಂಧವನು ಧರಿಸುತೆ । ಮಾಲೆಯಕಂಠದಿತಾಳಿ ॥೨॥

ಆಹಿಂತಕ—ಎಲೋ, ಚಾರುದತ್ತ, ಬಾ ಬಾ. ಇದೇ ಸಾರುವ ಸ್ಥಳ. ಅಯ್ಯಾ, ಕೇಳಿ ಕೇಳಿ, ಇವನು ಸಾಹುಕಾರ ವಿನಯದತ್ತನ ಮೊಮ್ಮಗ, ಸಾಗರದತ್ತನಿಗೆ ಮಗ, ಚಾರುದತ್ತನೆಂದು ಇವನ ಹೆಸರು. ಇವನು ದ್ರವ್ಯಕ್ಕೆ ಆಸೆಪಟ್ಟು ವಿಜನವಾದ ಪುಷ್ಪಕರಂಡಕಜೀರ್ಣೋದ್ಯಾನಕ್ಕೆ ವಸಂತಸೇನೆಯನ್ನು ಕರೆದುಕೊಂಡುಹೋಗಿ ಅಲ್ಲಿ ಅವಳ ಕೊರಲನ್ನು ಮುರಿದು ಕೊಂದುಹಾಕಿ, ಒಡವೆಗಳನ್ನು ತೆಗೆದುಕೊಂಡು ಬಂದನು. ಇವನು ತನ್ನ ತಪ್ಪಿತವನ್ನು ಒಪ್ಪಿಕೊಂಡನು. ಬಳಿಕ ಪಾಲಕ ಮಹಾರಾಜನು ಇವನನ್ನು ಕೊಲ್ಲುವಂತೆ ನಮಗೆ ಆಜ್ಞಾಪಿಸಿದನು. ಇನ್ನಾರಾದರೂ ಇಂತಹ ಅಕಾರ್ಯವನ್ನು ಮಾಡಿದರೆ ದೊರೆಯು ಅವರನ್ನೂ ಹೀಗೆಯೇ ಶಿಕ್ಷಿಸುವನು (ಎಂದು ಸಾರುವನು).

ಚಾರುದತ್ತ—ಅಯ್ಯೋ! ಪಾಪಿಯಾದ ನನ್ನಿಂದ ಪರಿಶುದ್ಧವಾದ ನನ್ನ ವಂಶವನ್ನು ಜಾತಿನೀಚರಾದ ಈ ಚಂಡಾಲರೆಲ್ಲರೂ ಸಾರುವಹಾಗಾಯಿತಲ್ಲಾ! (ಮುಂದೆನೋಡಿ ಕಿವಿಯನ್ನು ಮುಚ್ಚಿಕೊಂಡು) ಶಿವ ಶಿವಾ! ಇದನ್ನು ನಾನು ಹೇಗೆ ಕೇಳಲಿ? ಹಾ ಪ್ರಿಯೆ, ವಸಂತಸೇನೆ, ನಿನ್ನನ್ನು ಕಳೆದುಕೊಂಡುದೂ ಅಲ್ಲದೆ ನಿನ್ನನ್ನು ಕೊಂದೆನೆಂಬ ಈ ಅಪಯಶಸ್ಸನ್ನು ನಾನು ಹೇಗೆ ಸೈರಿಸಲಿ?

॥ ರಾಗ ನೀಲಾಂಬರಿ ॥

ಎಂತುಸೈರಿಸುವೆನು ಹಾ । ಕಾಂತೆಯೇ ನಾನಿನ್ನೆಂತು ॥ಪ॥
ಇಂತು ನಿನ್ನನು ನೀಗಿ । ದಪವಾದದಿಂದೆನ್ನ ।
ಅಂತರಂಗದೊಳಯ್ಯೊ ಸಂತಾಪವಾಂತು ॥೧॥
ಸನ್ನುತಾಂಗಿಯೆ ರಮಣಿ । ಪನ್ನಗವೇಣಿ ।
ನಿನ್ನಧರಾಮೃತ ಪಾನವಗೈದ । ನಾಂ ।
ಇನ್ನೆಂತೀ ಅಪಕೀರ್ತಿವಿಷವಹೀರುವೆನು ॥೨॥
ಇಂದು ಸನ್ನಿಭವದನೆ । ಕುಂದಾಭರದನೆ ।
ಎಂದಿಗು ನನ್ನನಗಲಿ ಪೋಗದಿರ್ದನೀಂ ।
ಇಂದೆನ್ನ ತೊರೆದಿಂತು ಪೋದುದು ತರವೇ ॥೩॥

(ಸುತ್ತಲೂ ನೋಡಿ) ಅಯ್ಯೋ! ನನ್ನ ಸ್ನೇಹಿತರೂ ಕೂಡ

ನನ್ನನ್ನು ನೋಡಿ ಕಾಣದವರಂತೆ ಮುಸುಕು ಹಾಕಿಕೊಂಡು ಹೋಗುವ ರಲ್ಲಾ ಯುಕ್ತವೇ ಸರಿ ;

ಕಂ ॥ ಸಿರಿಯಿರ್ಪ ಕಾಲದೊಳ್ ಸ।
ರ್ವರುಮಾತ್ಮೀಯರ್ಕಳಲ್ತೆ ಸಿರಿತೊಲಗಲೊಡಂ ॥
ಕರವಿಡಿದರಸಿಯುಮಾತ್ಮಭ।
ವರುಮುಳಿವರ್ ಪೇಳಲೇಕೆಮಿಕ್ಕರನಕಟಾ ॥

ಹಾ ಮಿತ್ರ ! ಹಾ ರೋಹಸೇನ ! ಹಾ ಬ್ರಾಹ್ಮಣಿ ! ನನ್ನ ವಿಪತ್ತನ್ನು ನೀವು ತಿಳಿಯದೆ ಇರುವಿರಲ್ಲಾ—(ರೋದಿಸುವನು)

ತೆರೆಯಲ್ಲಿ—ಹಾ ! ತಾತ ! ಹಾ ! ಪ್ರಾಣಮಿತ್ರ !

ಚಾರುದತ್ತ—(ಕೇಳಿ) ಅಯ್ಯಾ, ಉತ್ತಮರೆ, ನಿಮ್ಮಲ್ಲಿ ಒಂದು ಪ್ರಾರ್ಥನೆಯಿರುವುದು.

ಆಹಿಂತಕ—ನೀನು ಚಂಡಾಲರಾದ ನಮ್ಮನ್ನು ಪ್ರಾರ್ಥಿಸಿ ಬೇಡಿಕೊಳ್ಳಬಹುದೆ ?

ಚಾರುದತ್ತ—ಶಿವಶಿವಾ, ಹಾಗೆನ್ನಬೇಡಿ, ಚಂಡಾಲರು ವಿಚಾರಣೆ ಮಾಡದಿರುವ ಪಾಲಕಮಹಾರಾಜನಂತೆ ದುರಾಚಾರರಲ್ಲ. ಆದುದರಿಂದ ನಮ್ಮ ರೋಹಸೇನನ ಮುಖವನ್ನು ತೋರಿಸಬೇಕೆಂದು ನಿಮ್ಮನ್ನು ಬೇಡಿಕೊಳ್ಳುವೆನು.

ರೋಹಸೇನ—ಹಾ ! ತಾತ ! ಹಾ ! ಜನಕಾ ! (ಅಳುತ್ತಾ ವಿದೂಷಕನೊಡನೆ ಬಂದು)

ರಾಗ ॥ ಬೇಹಾಗ್ ॥

ಎಲ್ಲಿನೀನು ಪೋಪೆ ತಾತ । ನಿಲ್ಲುಪೇಳ್ವೆನೊಂದು ಮಾತ ।
ಖುಲ್ಲರನ್ನು ನೋಡೆಹೃದಯ । ತಲ್ಲಣಿಪ್ಪುದೇನಪಾಯ ॥೧॥
ತಂದೆನೀನು ಪೋಗಲಿಂತು । ಮುಂದೆನಾನು ಬಾಳ್ವುದೆಂತು ।
ನೊಂದುಪೋಗೆ ನಿನ್ನದೇಹ। ಮಂದಭಾಗ್ಯನಾಗುವೆ ಹಾ ॥೨॥
ಕುನ್ನಿದೈವ ಪೆನ್ನಬೇಗ । ಖಿನ್ನನನ್ನುಗೈದು ದೀಗ ।
ಇನ್ನು ಸೈಸಲಾರೆಶೋಕ। ವನ್ನು ಪೇಳು ನೀವಿವೇಕ ॥೩॥

ವಿದೂಷಕ—ಹಾ ! ಪ್ರಿಯಮಿತ್ರನೆ ! ಪುನಃ ನಿನ್ನನ್ನು ಎಲ್ಲಿ ನೋಡಲಿ ?

ಆಹಿಂತಕ—ಎಲೋ ಚಾರುದತ್ತ, ನಡೆ ನಡೆ.

ವಿದೂಷಕ—ಅಯ್ಯೋ ! ಈ ಚಂಡಾಲರೂ ಕೂಡಾ ಎಲೋ, ಚಾರುದತ್ತ—ಎಂದು ಕೂಗುವ ಹಾಗಾಯಿತಲ್ಲಾ ! ಮಾಡತಕ್ಕುದೇನು ? ಇದು ಸಹಜ, ಲೋಕದಲ್ಲಿ,

ಕಂ॥ ರಾಜಬಲವಿರ್ಪ ಮನುಜಂ ।
ಗೀಜಗಮಾಗುಂ ನೃಪರ್ಗೆತಕ್ಕಮಾನ್ಯತೆಯುಂ ತಾಂ ॥
ರಾಜಾಗ್ರಹಕೆಡೆಯಾದಂ ।
ಭಾಜನನಿರದಕ್ಕುಮಲ್ಪರಾಕ್ಷೇಪಣೆಗಂ ॥

ಅಯ್ಯಾ ಚಂಡಾಲರೆ, ಈ ಚಾರುದತ್ತನನ್ನು ಏತಕ್ಕೋಸ್ಕರ ಏಕ ವಚನದಿಂದ ಕರೆಯುವಿರಿ ? ಚಂದ್ರನು ರಾಹುಗ್ರಸ್ತನಾದ ಮಾತ್ರಕ್ಕೇ ಅವನು ವಂದ್ಯನಲ್ಲವೇ ?

ರೋಹಸೇನ—ಅಯ್ಯಾ, ಚಂಡಾಲರೆ, ನಮ್ಮ ತಂದೆಯನ್ನು ಎಲ್ಲಿಗೆ ಕರೆದುಕೊಂಡು ಹೋಗುವಿರಿ ?

ಚಾರುದತ್ತ—ಅಪ್ಪಾ, ಮಗುವೆ, ನನ್ನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುವರು.

ಆಹಿಂತಕ—ಮಗುವೆ, ಚಂಡಾಲಕುಲದಲ್ಲಿ ಹುಟ್ಟಿದವರಾದರೂ ನಾವು ಚಂಡಾಲರಲ್ಲ. ಸತ್ಪುರುಷರನ್ನು ಯಾರು ಸಂಕಟಪಡಿಸುವರೋ. ಅವರೇ ಚಂಡಾಲರು, ಪಾಪಿಗಳು.

ರೋಹಸೇನ—ಆದರೆ ನಮ್ಮ ತಂದೆಯನ್ನು ಏಕೆ ಕೊಲ್ಲುವಿರಿ ?

ಗೋಹ—ಆಯುಷ್ಮಂತನೆ, ರಾಜಾಜ್ಞೆಯು ಕೊಲ್ಲುವುದೇ ಹೊರತು ನಾವಲ್ಲ.

ರೋಹಸೇನ—ಆದರೆ ನನ್ನನ್ನು ಕೊಲ್ಲಿ, ನಮ್ಮ ತಂದೆಯನ್ನು ಬಿಡಿ.

ರಾಗ ॥

ಅಯ್ಯಾ ನಿಮಗೆ। ಮುಗಿವೆಕೈಯ್ಯ।ಅಯ್ಯಾ ಪಿತನ।ಬಿಡಿ ದಮ್ಮಯ್ಯ ॥೧॥
ತಂದೆಯನ್ನು ಬಿಟ್ಟು ನನ್ನ । ಕೊಂದುಪುಣ್ಯ । ವಂತರಾಗಿ ॥೨॥
ಬಾಲನಲ್ಲಿ ದಯವಿಲ್ಲವೆ । ಆಲಿಸದೆ ಪೋಗುವುದಿದುಸರಿಯೆ ॥೩॥
ಪಿತನು ಯಮನ ಪುರಕೆ ಪೋಗೆ । ಕ್ಷಿತಿಯೊಳೆಂತು ಜೀವಿಪೆನಾಹ ॥೪॥

ಆಹಿಂತಕ—ಇವನಲ್ಲವೆ ಸುಪುತ್ರನು ! ಮಗುವೆ, ನೀನು ದೀರ್ಘಾಯುಷ್ಮಂತನಾಗಿರು.

ಚಾರುದತ್ತ—(ರೋಹಸೇನನನ್ನು ತಬ್ಬಿಕೊಂಡು)

ಕಂದ ॥ ಕಂದನೆ, ಬಾಗಾ, ಸ್ನೇಹಮಿ ।
ದೊಂದೆತೆರಂ ಸಧನನಿರ್ಧನರರ್ಗಿರ್ವರ್ಗಂ ॥
ಚಂದನಮೇಗಡ ಹೃದಯಾ ।
ನಂದನಮೆನಿಸಿರ್ಪ ಲೇಪನಂ ಸಂತತಮುಂ ॥

ರಾಗ ॥ ಸಾವೇರಿ ॥

ಎಂತೀಬಾಲಕನನ್ನು ತೊರೆದುಃಪೋಗುವೆನು ॥ಪ॥
ಅಂತರಂಗದಿಗುರಿಯಾಗಿ ಶೋಕಕೀಪರಿಯೊಳ್ ॥ಅ॥ಪ॥
ಬಾಲಲೀಲೆಗಳನ್ನು ಕಣ್ಣಾರೆನೋಡದೆ ।
ಕಾಲನಾಜ್ಞೆಗೆನನ್ನ ಗುರಿಮಾಡುವವಧ್ಯ ।
ಮಾಲಿಕೆಯನ್ನಿಂತು ಕೊರಳಲ್ಲಿ ಧರಿಸುತ ।
ಶೂಲವಂಹತ್ತಿ ದೇಹವಂಬಿಡಲು ॥೧॥
ಹಾನಿಯೇಕೆನಗಿಂತು ಸಂಪ್ರಾಪ್ತಮಾದುದೊ ।
ಮಾನಿನಿ ಪೋದರು ಸಿರಿಯೆಲ್ಲಪೋದರು ।
ಸೂನುವಂ ನೋಡುತ । ಕಾಲವ ಅಳೆಯುವ ।
ನಾನೇಕಂದನೆ ನೀನು ಪೋಗೆಂದುಪೇಳುತ ॥೨॥

ಮಗುವೆ, ನಾನಿನ್ನು ವಧ್ಯಸ್ಥಾನಕ್ಕೆ ಹೋಗುವೆನು.

ವಿದೂಷಕ—ಅಯ್ಯಾ, ನನ್ನ ಸ್ನೇಹಿತನನ್ನು ಬಿಡಿ. ಅವನಿಗೆ ಪ್ರತಿಯಾಗಿ ನನ್ನನ್ನು ಕೊಲ್ಲಿ.

ಚಾರುದತ್ತ—ಶಿವಶಿವಾ ! ಹಾಗೆನ್ನಬೇಡ.

ಆಹಿಂತಕ—ಎಲೋ, ಮುಂದೆ ಕಾಣುವುದೇ ಎರಡನೆಯಘೋಷಣಸ್ಥಾನ. ಇಲ್ಲಿ ನೀನು ಗಟ್ಟಿಯಾಗಿ ಸಾರುತ್ತಾ ನಡೆ. (ಎಂದು ಚಾರುದತ್ತನನ್ನು ಕರೆದುಕೊಂಡು ಹೋಗುವರು.)

ಗೋಹ—(ಸಾರುತ್ತಾ ಹೋಗುವನು).

ಸ್ಥಾವರಕ—ಏನು ಏನು! ಅಪರಾಧಿಯಲ್ಲದ ಚಾರುದತ್ತನನ್ನು ಕೊಲ್ಲುವರೆ! ಅಯ್ಯೋ ನಾನೇನು ಮಾಡಲಿ? ದುಷ್ಟ ಶಕಾರನು ನನ್ನ ಕಾಲಿಗೆ ಸಂಕಲೆಯನ್ನು ಹಾಕಿರುವನಲ್ಲಾ! ಆಗಲಿ ಇಲ್ಲಿಂದಲೇ ಗಟ್ಟಿಯಾಗಿ ಕೂಗುವೆನು. ಅಯ್ಯಾ, ಕೇಳಿ ಕೇಳಿ; ಪಾಪಿಯಾದ ನಾನು ತಂದ ರಥವನ್ನು ತನ್ನದೆಂದು ಭ್ರಮಿಸಿ ಆ ವಸಂತಸೇನೆಯು ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಬಂದಳು. ಆಮೇಲೆ ಶಕಾರನು ಎಷ್ಟು ನಿರ್ಬಂಧ ಮಾಡಿದರೂ, ಸ್ವಾಧೀನಳಾಗದೆ ಇದ್ದುದರಿಂದ ಆ ವಸಂತಸೇನೆಯನ್ನು ಅವನೇ ಕೊಂದನು. ಈ ಮಹತ್ಮನಲ್ಲ. ಅಯ್ಯೋ! ನಾನೆಷ್ಟು ಕೂಗಿದರೂ ದೂರವಾಗಿರುವುದರಿಂದ ಇವರಿಗೆ ಕೇಳಿಸುವುದೇ ಇಲ್ಲ. ಆಗಲಿ, ಈ ಗವಾಕ್ಷದಿಂದ ಕೆಳಕ್ಕೆ ಧುಮುಕಿ ಓಡಿಹೋಗಿ ಹೇಳುವೆನು. ಧುಮುಕುವಾಗ ಏನಾದರೂ ಪೆಟ್ಟು ತಗಲಿ ನಾನು ಮೃತನಾದರೆ ಒಳ್ಳೆಯದೇ ಆಯಿತು. ಹೇಗಾದರೂ ಮಾಡಿ ಆ ಚಾರುದತ್ತನನ್ನುಳಿಸಿದರೆ ನನಗೆ ಪರಲೋಕ ವುಂಟು. (ಧುಮುಕಿ) ಓಹೋ! ನನಗೇನೂ ಆಯಾಸವೇ ಆಗಲಿಲ್ಲ. ಬೆನ್ನಿನಮೇಲೆ ಮಾತ್ರ ಸ್ವಲ್ಪ ಗಾಯವಾಯಿತು. ಕಾಲಿನಲ್ಲಿದ್ದ ಸಂಕಲೆಯು ಕಿತ್ತುಹೋಯಿತು. ಇರಲಿ. (ಎಂದು ಓಡಿಹೋಗುವನು.)

ಶಕಾರ—ಈ ಹೊತ್ತು ಸಂತೋಷವಾಗಿ ಬೇಕಾದಷ್ಟು ಮತ್ಸ್ಯ ಮಾಂಸಗಳನ್ನು ತಿಂದೆನು. (ಕೇಳಿ) ಇದೇನು! ಒಡೆದುಹೋದ ಕಂಚಿನ ಸದ್ದಿನಂತೆ ಚಂಡಾಲರೇನೋ ಕೂಗುತ್ತಿರುವರು. ಈ ತಮಟೆಯ ಶಬ್ದ ಬೇರೆ ಕೇಳುತ್ತಿರುವುದು. ಇದನ್ನೆಲ್ಲ ನೋಡಿದರೆ ಸುಮಾರು ಆ ದರಿದ್ರ ಚಾರುದತ್ತನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುತ್ತಿರ ಬಹುದೆಂದು ತೋರುವುದು. ಆದುದರಿಂದ ನಾನು ಹೋಗಿ ನನ್ನ ಶತ್ರು ಸಾಯುವುದನ್ನು ಕಣ್ಣುತುಂಬ ನೋಡುವೆನು. ಇದೂ ಅಲ್ಲದೆ ಶತ್ರು ವಿನಾಶವನ್ನು ನೋಡಿದ ಪುರುಷನಿಗೆ ಮತ್ತೊಂದು ಜನ್ಮದಲ್ಲಿ ಕಣ್ಣುನೋವು ಬರುವುದಿಲ್ಲವೆಂದು ದೊಡ್ಡವರು ಹೇಳುತ್ತಿದ್ದರು. ಆದಕಾರಣ ಜಾಗ್ರತೆ ಯಾಗಿ ಹೋಗಿ ಉಪ್ಪರಿಗೆಯನ್ನು ಹತ್ತಿ ಆ ಸಂತೋಷವನ್ನು ನೋಡು ವೆನು. ಎಲ ಎಲಾ! ಈ ದರಿದ್ರ ಚಾರುದತ್ತನನ್ನು ವಧ್ಯಸ್ಥಾನಕ್ಕೆ ಕರೆದು ಕೊಂಡು ಹೋಗುವಾಗಲೇ ಇಷ್ಟು ಜನ ಸೇರಬೇಕಾದರೆ ನಮ್ಮಂತಹ

ದೊಡ್ಡ ಮನುಷ್ಯರನ್ನು ಕರೆದುಕೊಂಡು ಹೋಗುವಾಗ ಇನ್ನೆಷ್ಟುಜನ ಸೇರಬಹುದು! ಇವನನ್ನು ದಕ್ಷಿಣಶ್ಮಶಾನಕ್ಕೆ ಕರೆದುಕೊಂಡು ಹೋಗುವ ರೇನೋ. ಇದೇಕೆ ನಮ್ಮ ಮನೆಬಾಗಿಲಲ್ಲೇ ತಮ್ಮಟೆಯನ್ನು ನಿಲ್ಲಿಸಿದರು? (ಮುಂದೆ ನೋಡಿ) ಅಯ್ಯೋ! ಇನ್ನೇನುಗತಿ! ನಮ್ಮ ಸ್ಥಾವರಕನೂ ಅಲ್ಲೇ ಇರುವನಲ್ಲಾ! ನನ್ನ ಗುಟ್ಟನ್ನೇನಾದರೂ ಅವರ ಸಂಗಡ ಹೇಳು ವನೋ ಏನೋ! ಜಾಗ್ರತೆಯಾಗಿ ಹೋಗಿ ಅವನನ್ನು ನೋಡುವೆನು. (ಉಪ್ಪರಿಗೆಯಿಂದಿಳಿದು ಓಡಿಹೋಗುವನು).

(ಭಿಕ್ಷು ವಸಂತಸೇನೆಯರ ಪ್ರವೇಶ.)

ಭಿಕ್ಷು--ವಸಂತಸೇನೆಯೇ, ನಿನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗಲಿ?

ವಸಂತಸೇನೆ—ಪೂಜ್ಯನೇ, ನಾನು ಆರ್ಯಚಾರುದತ್ತನ ದರ್ಶನ ಸುಖವನ್ನು ಅನುಭವಿಸಬೇಕು. ಆದುದರಿಂದ ಆತನ ಮನೆಗೆ ಕರೆದು ಕೊಂಡು ಹೋಗು.

ಭಿಕ್ಷು—ಒಳ್ಳೆಯದು, ಈ ರಾಜಮಾರ್ಗದಲ್ಲಿ ಹೋಗೋಣ. ಇದೇನು? ಇಲ್ಲಿ ಬಹಳ ಕೋಲಾಹಲವಾಗಿರುವುದು!

ವಸಂತಸೇನೆ—(ಮುಂದೆನೋಡಿ) ಓಹೋ! ಇದೇನು, ಉಜ್ಜ ಯಿನೀ ಪಟ್ಟಣದ ಜನರೆಲ್ಲರೂ ಇಲ್ಲೇ ಸೇರಿರುವರು?

ಭಿಕ್ಷು—ನಿಜ, ವಿಚಾರಿಸೋಣ, ನಡೆ.

ಚಂಡಾಲರು—(ಸಾರುವರು).

ಸ್ಥಾವರಕ—(ಪ್ರವೇಶಿಸಿ) ಅಯ್ಯಾ, ದಾರಿಬಿಡಿ! ದಾರಿಬಿಡಿ!

ಆಹಿಂತಕ--ಇವನಾರು? ಹೀಗೆ ಕೂಗುತ್ತಾ ಬರುವನು.

ಸ್ಥಾವರಕ—ಅಯ್ಯಾ, ಕೇಳಿ, ಪಾಪಿಯಾದ ನಾನು ತನ್ನದೆಂದು ಭ್ರಮಿಸಿ ರಥವೇರಿದ ಆ ವಸಂತಸೇನೆಯನ್ನು ಪುಷ್ಪಕರಂಡಕ ಜೀರ್ಣೋ ದ್ಯಾನಕ್ಕೆ ಕರೆದುಕೊಂಡು ಹೋದೆನು. ಆಮೇಲೆ ಶಕಾರನು ಎಷ್ಟು ನಿರ್ಬಂಧಮಾಡಿದರೂ ಆ ವಸಂತಸೇನೆಯು ತನಗೆ ಸ್ವಾಧೀನಳಾಗದಿದ್ದು ದರಿಂದ ಆಕೆಯನ್ನು ಅವನೇ ಕೊಂದನು. ಚಾರುದತ್ತನಲ್ಲ.

ಚಾರುದತ್ತ—(ಸ್ವಗತ) ಓಹೋ! ಈತನಾರು? ಮಳೆಯಿಲ್ಲದೆ ಒಣಗಿಹೋಗಿರುವ ಬೆಳೆಗೆ ಮಳೆಗರೆಯುವಂತೆ ಇಂತಹ ಸಮಯದಲ್ಲಿ ನನ್ನನ್ನು ಬದುಕಿಸುವನು. (ಪ್ರಕಾಶ) ಅಯ್ಯಾ, ಚಂಡಾಲರೆ, ಈಗಲಾದರೂ ಕೇಳಿದಿರೋ? ನಾನು ಮರಣಕ್ಕೆ ಹೆದರುವನಲ್ಲ. ಅಪಯಶಸ್ಸಿಲ್ಲದೆ ನನ್ನ ಶರೀರಪತನವಾದರೂ ಅದನ್ನು ಪುತ್ರೋತ್ಸವಕ್ಕೆ ಸಮವಾಗಿ ತಿಳಿಯುವೆನು.

ಗೋಹ—ಸ್ಥಾವರಕನೇ, ನೀನು ಹೇಳುವ ಮಾತು ಸತ್ಯವೇ?

ಸ್ಥಾವರಕ—ಅಯ್ಯಾ, ಕೇಳಿ; ಶಕಾರನು ವಸಂತಸೇನೆಯನ್ನು ಕೊಂದ ಸಮಾಚಾರವನ್ನು ಯಾರಿಗೂ ಹೇಳದಂತೆ ನನಗೆ ಸಂಕಲೆಯನ್ನು ಹಾಕಿ ತನ್ನ ಮನೆಯ ಉಪ್ಪರಿಗೆಯ ಮೇಲೆ ಇಟ್ಟಿದ್ದನು. ಅದೋ, ನೋಡಿ ಅವನೇ ಬರುವನು.

ಆಹಿಂತಕ—ದಾರಿಬಿಡಿ! ದಾರಿಬಿಡಿ! ಜಾಗರೂಕರಾಗಿರಿ! ತುಂಟಗೂಳಿಯು ಬರುತ್ತಿರುವುದು!

ಶಕಾರ—ಎಲೋ, ಅಲ್ಲಿ ಯಾರು? ದಾರಿಬಿಡಿ! (ಸ್ಥಾವರಕನನ್ನು ಕುರಿತು) ಅಪ್ಪಾ, ಸ್ಥಾವರಕನೆ, ಮನೆಗೆ ಹೋಗೋಣ ಬಾ.

ಸ್ಥಾವರಕ—ಚಿಃ! ನೀಚನೆ, ಆ ವಸಂತಸೇನೆಯನ್ನು ಕೊಂದುದು ಸಾಲದೆ ಧರ್ಮಾತ್ಮನಾದ ಚಾರುದತ್ತನನ್ನೂ ಕೊಲ್ಲುವುದಕ್ಕೆ ಯತ್ನಿಸಿದೆಯಾ?

ಶಕಾರ—ಏನು? ನಾನು ಚಿನ್ನದಂತಹ ಮನುಷ್ಯ. ಅಂತಹ ಕೆಲಸಮಾಡೇನೇ?

ಆಹಿಂತಕ—ಅಯ್ಯಾ, ವಸಂತಸೇನೆಯನ್ನು ಕೊಂದವನು ನೀನಂತೆ. ಆರ್ಯಚಾರುದತ್ತನಲ್ಲವಂತೆ.

ಶಕಾರ—ಹೀಗೆ ಹೇಳಿದವನಾರು?

ಆಹಿಂತಕ—ಇದೊ, ಈ ಸತ್ಪುರುಷನೇ ಹೇಳಿದನು.

ಶಕಾರ—(ಸ್ವಲ್ಪ ಯೋಚಿಸಿ, ಸ್ವಗತ) ಅಯ್ಯೋ, ಇವನ ಕಾಲಿಗೆ ಸಂಕಲೆಯನ್ನು ಗಟ್ಟಿಯಾಗಿ ಹಾಕಿರಲಿಲ್ಲ. ನನ್ನ ಗುಟ್ಟನ್ನು ತಿಳಿದಿರುವವನು ಇವನೇ ಈಗೇನು ಮಾಡಲಿ? (ಯೋಚಿಸಿ) ಅಯ್ಯಾ, ಇವನ

ಮಾತನ್ನು ನಂಬಬೇಡಿ. ಇವನು ನಮ್ಮ ಮನೆಯಲ್ಲಿ ಚಿನ್ನವನ್ನು ಕದ್ದಿದ್ದನು. ಅದಕ್ಕಾಗಿ ನಾನು ಇವನನ್ನು ಹೊಡೆದು, ಇವನ ಕಾಲಿಗೆ ಸಂಕಲೆಯನ್ನು ಹಾಕಿದ್ದೆನು. ಆ ಹೊಟ್ಟೆಕಿಚ್ಚಿನಿಂದ ನನ್ನಮೇಲೆ ಹೀಗೆ ಹೇಳುವನು. (ತನ್ನ ಕಪ್ಪವನ್ನು ಸ್ಥಾವರಕನ ಕೈಯಲ್ಲಿ ಕೊಟ್ಟು) ಅಪ್ಪಾ, ಇದನ್ನು ತೆಗೆದುಕೊಂಡು ನನ್ನಮೇಲೆ ಮಾತ್ರ ಹೇಳದಿರು.

ಸ್ಥಾವರಕ—ಅಯ್ಯಾ, ನೋಡಿ ನೋಡಿ, ತನ್ನಮೇಲೆ ಹೇಳದಿರಲೆಂದು ನನಗೆ ಲಂಚಕೊಟ್ಟಿರುವನು. (ಎಂದು ಕಪ್ಪವನ್ನು ತೋರಿಸುವನು.)

ಶಕಾರ (ಕಿತ್ತುಕೊಂಡು) ಅಯ್ಯಾ, ಇದೊ ನೋಡಿ, ಇದೇ ಕಪ್ಪವನ್ನು ಇವನು ನಮ್ಮ ಮನೆಯಲ್ಲಿ ಕದ್ದಿದ್ದುದು. ಇದಕ್ಕಾಗಿಯೇ ಇವನನ್ನು ನಾನು ಹೊಡೆದು ಕಾಲಿಗೆ ಸಂಕಲೆಹಾಕಿದ್ದುದು. ನಾನು ಹೊಡೆದಿದ್ದುದಕ್ಕೆ ಗುರುತುನೋಡಿ, ಬೆನ್ನಿನಮೇಲೆ ಗಾಯವಾಗಿರುವುದು.

ಇಬ್ಬರೂ—(ಸ್ಥಾವರಕನ ಬೆನ್ನನ್ನು ನೋಡಿ) ಅಹುದಹುದು. ಇವನ ಮಾತು ನಿಶ್ಚಯ.

ಸ್ಥಾವರಕ—ಅಯ್ಯೋ, ಪರಸೇವಾವೃತ್ತಿಯೇ ಇಂತಹುದು. ನಾನು ಎಷ್ಟು ವಿಧವಾಗಿ ಹೇಳಿದರೂ ಇವರು ನನ್ನ ಮಾತನ್ನು ಸತ್ಯವೆಂದು ನಂಬುವುದಿಲ್ಲ. (ಚಾರುದತ್ತನನ್ನು ಕುರಿತು) ಅಯ್ಯಾ, ಚಾರುದತ್ತನೆ, ನಿನ್ನನ್ನು ಬದುಕಿಸಬೇಕೆಂದು ನಾನು ಮಾಡತಕ್ಕ ಸಾಹಸವನ್ನೆಲ್ಲ ಮಾಡಿದೆನು. ಇನ್ನೇನು ಮಾಡಲಿ? ನನ್ನ ಮಾತನ್ನು ನಂಬುವುದಕ್ಕೆ ನಾನೇನು ದೊರೆಯ ಭಾವಮೈದುನನೇ! ಅಥವಾ ಅಳಿಯನೇ! ಅಲ್ಲವೇ, ನನಗೆ ಅಧಿಕಾರವೇನಾದರೂ ಇರುವುದೊ? ಯಾವುದೂ ಇಲ್ಲ.

ಚಾರುದತ್ತ—ಅಯ್ಯಾ, ನನ್ನ ದುರದೃಷ್ಟಕ್ಕೆ ನೀನೇನು ಮಾಡೀಯೆ?

ಶಕಾರ—ಇನ್ನೂ ಏತಕ್ಕೆ ಸಾವಕಾಶಮಾಡುವಿರಿ? ಇವನನ್ನು ಜಾಗ್ರತೆಯಾಗಿ ಕೊಲ್ಲಿ.

ರೋಹಸೇನ—ಚಂಡಾಲರೆ, ನನ್ನ ತಂದೆಯನ್ನು ಬಿಡಿ. ನನ್ನನ್ನು ಕೊಲ್ಲಿ.

ಶಕಾರ—ಎಲೋ, ಇವನನ್ನೂ ಅವನನ್ನೂ ಇಬ್ಬರನ್ನೂ ಕೊಲ್ಲಿ.

ಚಾರುದತ್ತ—ಅಪ್ಪಾ, ಈ ಮೂರ್ಖನು ಹಾಗೂ ಮಾಡಿಸತಕ್ಕವನೇ ಸರಿ. ನೀನು ನಿಮ್ಮ ತಾಯಿಯ ಸಮೀಪಕ್ಕೆ ಹೋಗು.

ರೋಹಸೇನ—ಅಪ್ಪಾ, ನಾನು ಹೇಗೆ ಹೋಗಲಿ ?

ಚಾರುದತ್ತ—ನೀನು ನಿಮ್ಮ ತಾಯಿಯನ್ನು ಕರೆದುಕೊಂಡು ಈಗಲೇ ಆಶ್ರಮಕ್ಕೆ ಹೊರಟುಹೋಗು. ಇಲ್ಲದಿದ್ದರೆ ನನ್ನ ಸಂಬಂಧ ದಿಂದ ನಿನಗೂ ಇಂತಹ ದುರವಸ್ಥೆಯೇ ಸಂಭವಿಸುವುದು. (ವಿದೂಷಕ ನನ್ನು ನೋಡಿ) ಅಯ್ಯಾ, ಮಿತ್ರನೆ, ಇವನನ್ನು ಮೆಲ್ಲಗೆ ಕರೆದುಕೊಂಡು ಹೋಗು.

ವಿದೂಷಕ—ಅಯ್ಯಾ, ಮಿತ್ರನೆ ? ನೀನು ಹೋದಬಳಿಕ ನಾನು ಬದುಕಿರುವೆನೆಂದು ತಿಳಿದಿರುವೆಯೊ ?

ಚಾರುದತ್ತ—ಮಿತ್ರನೆ, ಸ್ವತಂತ್ರನಾದ ನೀನು ನಿಷ್ಕಾರಣವಾಗಿ ಪ್ರಾಣತ್ಯಾಗಮಾಡುವುದು ಅಯುಕ್ತವಲ್ಲವೆ ?

ವಿದೂಷಕ—(ಸ್ವಗತ) ಈ ಮಾತು ಯುಕ್ತವೇ ಸರಿ. ಆದರೇನು ? ಪ್ರಿಯಮಿತ್ರನನ್ನು ಬಿಟ್ಟು ನಾನು ಒಂದು ನಿಮಿಷವೂ ಇರಲಾರೆನು. ಆದು ದರಿಂದ ಈ ರೋಹಸೇನನನ್ನು ಇವನ ತಾಯಿಯ ಸಮೀಪದಲ್ಲಿ ಬಿಟ್ಟು ಪ್ರಾಣತ್ಯಾಗ ಮಾಡುವೆನು. (ಪ್ರಕಾಶ) ನೀನು ಹೇಳಿದಂತೆಯೇ ಆಗಲಿ. ಈ ರೋಹಸೇನನನ್ನು ಕರೆದುಕೊಂಡು ಹೋಗುವೆನು. (ನಮಸ್ಕರಿಸಿ ಹೋಗುವನು.)

ಶಕಾರ—ಎಲೋ, ಚಾರುದತ್ತನನ್ನೂ ಅವನ ಮಗನನ್ನೂ ಇಬ್ಬ ರನ್ನೂ ಕೊಲ್ಲಿ—ಎಂದು ನಾನು ಮೊದಲೇ ಹೇಳಲಿಲ್ಲವೆ ? ಅವನು ಹೊರಟು ಹೋಗುವನಲ್ಲಾ !

ಗೋಹ—ಈ ಚಾರುದತ್ತನನ್ನು ಪುತ್ರಸಮೇತನನ್ನಾಗಿ ಕೊಲ್ಲು ವಂತೆ ನಮಗೆ ರಾಜಾಜ್ಞೆಯಾಗಿಲ್ಲ.

ಶಕಾರ—(ಸ್ವಗತ) ವಸಂತಸೇನೆಯನ್ನು ಚಾರುದತ್ತನೇ ಕೊಂದ ನೆಂದು ಜನಗಳಿಗೆ ಇನ್ನೂ ನಂಬಿಕೆಯುಂಟಾಗಿರುವ ಹಾಗಿಲ್ಲ. (ಪ್ರಕಾಶ) ಎಲೋ, ಚಾರುದತ್ತ, ಜನರಿಗೆ ಇನ್ನೂ ಚೆನ್ನಾಗಿ ಗೊತ್ತಾಗಿಲ್ಲ. ವಸಂತ ಸೇನೆಯನ್ನು ನಾನೇ ಕೊಂದೆನೆಂದು ನಿನ್ನ ಬಾಯಿಂದಲೇ ಹೇಳು.

ಚಾರುದತ್ತ—(ಸುಮ್ಮನಿರುವನು.)

ಶಕಾರ—ಎಲೋ ಗೋಹ, ಇವನು ಸುಮ್ಮನೆ ಹೇಳುವುದಿಲ್ಲ. ಆದುದರಿಂದ ಈ ಕಡ್ಡಿಯಿಂದ ಚೆನ್ನಾಗಿ ಹೊಡೆದು ಹೇಳಿಸು.

ಗೋಹ—(ತಮ್ಮಟೆಯ ಕಡ್ಡಿಯನ್ನು ಮೇಲಕ್ಕೆತ್ತಿ) ಅಯ್ಯಾ, ಚಾರುದತ್ತನೆ, ಹೇಳು.

ಚಾರುದತ್ತ—ನನ್ನ ದೇಹ ಹೋದರೂ ಹೋಗಲಿ, ಹಾ ! ದೇವರೆ, ಮಾಡದೆ ಇರುವ ಈ ಅಕಾರ್ಯವನ್ನು ಮಾಡಿದೆನೆಂದು ಸುಳ್ಳುಹೇಳಿ ಅನ್ಯಾಯವಾಗಿ ಪಾಪಕ್ಕೆ ಹೇಗೆ ಗುರಿಯಾಗಲಿ ! ಅಯ್ಯೊ !

ರಾಗ.

ದುಃಖವನೆಂತುನಾಂ ಸೈಸಲಿ ಹಾಹಾ ।
ದಿಕ್ಕಿಲ್ಲದವನಂತಾದೆನೆದೇವ ॥ಪ॥
ನಾನೆಂತು ನೋಳ್ಪೆನು । ಸೂನುತಲ್ಲಣಿಪುದ ।
ದೀನನಾದೆನೆ ಪರಮೇಶಮಹೇಶ ॥೧॥
ನಿರಪರಾಧಿಯಾದೆನಗೆ । ಧರೆಯೊಳಗೀಗ ।
ಬಂದಿರುವ ಸಂಕಟಗಳ ಪರಿಹರಿಸೈನೀ ॥೨॥
ಸೃಷ್ಟಿಕರ್ತನೇಯೀ । ಕಷ್ಟವನೀನು ।
ದೃಷ್ಟಿಸಿನೋಡದೆ । ಭ್ರಷ್ಟನಮಾಳ್ಪುದೆ ॥೩॥

ಅಯ್ಯೊ ! ಪಾಪಿಯಾದ ನಾನು ಆ ವಸಂತಸೇನೆಯನ್ನು–ಮುಂದಕ್ಕೆ ಇವನೇ ಹೇಳುವನು.

ಶಕಾರ—ಕೊಂದೆಕೊಂದೆ–ಎಂದು ಬಗುಳು.

ಚಾರುದತ್ತ—ಸರಿ. ಇನ್ನು ನಾನು ಹೇಳತಕ್ಕುದೇನು ?

ಗೋಹ—ಎಲೋ, ಆಹಿಂತಕ, ಈ ಹೊತ್ತಿನ ಸರದಿ ನಿನ್ನದು.

ಆಹಿಂತಕ—ಇಲ್ಲ ಇಲ್ಲ, ನಿನ್ನದೇ.

ಗೋಹ—ಎಲೋ, ಆದರೆ ಲೆಕ್ಕಮಾಡೋಣ. (ಬೆರಳು ಎಣಿಸಿ) ನನ್ನದೇ ಆದರೆ ಒಂದು ಗಳಿಗೆ ತಾಳು.

ಆಹಿಂತಕ—ಏಕೆ ?

ಗೋಹ—ನಮ್ಮ ತಂದೆಯು ಸಾಯುವ ಕಾಲದಲ್ಲಿ "ಮಗನೆ, ನಿನ್ನ ಸರದಿ ಬಂದಾಗ ಜಾಗ್ರತೆ ಮಾಡಬೇಡ. ಸ್ವಲ್ಪ ಸಾವಕಾಶಮಾಡಿ ವಧ್ಯನನ್ನು ಕೊಲ್ಲು" ಎಂದು ನನಗೆ ಹೇಳಿದ್ದನು.

ಆಹಿಂತಕ—ಎಲೋ, ಹಾಗೆ ಹೇಳುವುದಕ್ಕೆ ಕಾರಣವೇನು ?

ಗೋಹ—ಯಾವನಾದರೂ ಒಬ್ಬ ಸತ್ಪುರುಷನು ದ್ರವ್ಯವನ್ನು ವ್ಯಯ ಮಾಡಿ ವಧ್ಯನನ್ನು ಬಿಡಿಸಬಹುದು. ಅಥವಾ ದೊರೆಗೆ ಪುತ್ರೋತ್ಸವ ವಾದರೆ ವಧ್ಯನಿಗೆ ಬಿಡುಗಡೆಯಾಗಬಹುದು. ದೊರೆತನಕ್ಕೆ ಬೇರೆಯವರು ಬಂದರೂ ಬರಬಹುದು. ಯಾವುದಾದರೂ ಒಂದು ಕಾರಣದಿಂದ ವಧ್ಯನು ಬದುಕಲಿ ಎಂದು ಹೇಳಿದ್ದನು.

ಶಕಾರ—ಏನು ಏನು ! ದೊರೆತನ ತಪ್ಪುವುದೋ ! ಎಲೋ, ಇವ ನನ್ನು ಜಾಗ್ರತೆಯಾಗಿ ಕೊಲ್ಲು. (ಸ್ವಗತ) ಈಗ ನಾನು ಹಿಂತಿರುಗಿ ಹೋಗಬಾರದು. ಚಾರುದತ್ತನಿಗೆ ಮರಣಪ್ರಾಪ್ತಿಯಾದಮೇಲೆ ನೋಡಿ ಕೊಂಡೇ ಹೋಗಬೇಕು.

ಗೋಹ—ಅಯ್ಯಾ, ಚಾರುದತ್ತನೆ, ಹೊತ್ತಾಗುತ್ತಾ ಬಂದಿತು. ರಾಜಾಜ್ಞೆಯನ್ನು ನಾವು ಉಲ್ಲಂಘಿಸುವುದಕ್ಕೆ ಆಗುವುದಿಲ್ಲ. ಭಯಪಡ ಬೇಡ. ನಿನಗೆ ಹಿಂಸೆಯಾಗದಂತೆ ಜಾಗ್ರತೆಯಾಗಿ ಕೊಲ್ಲುವೆವು. ಆದುದ ರಿಂದ ಸಾವಕಾಶಮಾಡದೆ ನಿನಗೆ ಇಷ್ಟರಾದವರನ್ನು ಸ್ಮರಿಸಿಕೊ.

ಚಾರುದತ್ತ—(ಬಹು ದುಃಖದಿಂದ) ಹಾ ! ದೈವವೇ, ನನಗಿಂತಹ ಅವಸ್ಥೆಯನ್ನು ತಂದೆಯಾ ?

॥ ರಾಗ ॥

ಕಾಂತೆಕುಟಿಲಾಳ ಕಾಂತೆವಸಂತಸೇನೆ ॥ಪ॥
ನಿಮಿಷವುನಿನ್ನನು ನೋಡದೀಶರೀರವ ।
ನಾಬಿಡಲಾರೆನಯ್ಯೋ ಲಲಿತಾಂಗಿ ॥
ಶಮನನಬಾಯಿಗೆ ಸಿಕ್ಕಿಬಾಳುವದೆಂತುಹಾ ।
ಶಾಂತನಾನಾದೆ ನಿನ್ನೇಂದುರಾಶೇ ॥೧॥

ಹಾ ! ಪ್ರಿಯೆ, ವಸಂತಸೇನೆ ! (ಎಂದು ರೋದಿಸುವನು.)

(ಭಿಕ್ಷು ವಸಂತಸೇನೆಯರ ಪ್ರವೇಶ.)

ಭಿಕ್ಷು—ವಸಂತಸೇನೆ, ಜನಗಳು ಸೇರಿರುವುದಕ್ಕೆ ಕಾರಣವು ಗೊತ್ತಾಯಿತು. ಚಾರುದತ್ತನು ನಿನ್ನನ್ನು ಕೊಂದನೆಂದು ಆತನನ್ನು ವಧಿಸಲು ಕರೆದುಕೊಂಡು ಹೋಗುತ್ತಿರುವರು.

ವಸಂತಸೇನೆ—(ನೋಡಿ) ಅಯ್ಯೋ! ಇನ್ನೇನುಗತಿ! ನಿರ್ಭಾಗ್ಯಳಾದ ನನಗೋಸ್ಕರ ಅಂತಹ ಸತ್ಯಸಂಧನನ್ನು ಕೊಲ್ಲುವರೆ? ಅಯ್ಯಾ, ಬೇಗಬೇಗ ನಡೆ. (ಎಂದು ಚಾರುದತ್ತನ ಸಮೀಪಕ್ಕೆ ಬಂದು ನೋಡಿ) ಅಯ್ಯಾ, ಬೇಡಿಬೇಡಿ. ಯಾವಳನ್ನು ಕೊಂದನೆಂದು ಈ ಮಹಾತ್ಮನನ್ನು ಕೊಲ್ಲುವಿರೋ ಆ ನಿರ್ಭಾಗ್ಯಳೇ ನಾನು; ಹಾ! ಚಾರುದತ್ತನೆ, (ಎಂದು ರೋದಿಸುವಳು).

ಗೋಹ—(ನೋಡಿ) ಓಹೊ! ಈಕೆ ಯಾರು? ಬೇಡಬೇಡವೆಂದು ಹೇಳುವಳು. (ನೋಡಿ) ಇದೇನಾಶ್ಚರ್ಯ? ಇವಳೇ ಆ ವಸಂತಸೇನೆ! ಅಯ್ಯಾ, ಅನ್ಯಾಯವಾಗಿ ನಿರಪರಾಧಿಯಾದ ಈ ಚಾರುದತ್ತನನ್ನು ಕೊಲ್ಲುತ್ತಿದ್ದೆವಲ್ಲಾ!

ಭಿಕ್ಷು—ಅಯ್ಯಾ, ಚಾರುದತ್ತನೆ. ನಿನಗೇಕೆ ಇಂತಹ ವಿಪತ್ತು ಬಂದಿತು?

ಆಹಿಂತಕ—ಈ ವೃತ್ತಾಂತವನ್ನು ಜಾಗ್ರತೆಯಾಗಿ ಪಾಲಕಮಹಾರಾಜನಿಗೆ ತಿಳಿಸುವೆನು (ಎಂದು ಹೋಗುವನು).

ಶಕಾರ—(ವಸಂತಸೇನೆಯನ್ನು ನೋಡಿ) ಅಯ್ಯೋ, ಈ ರಂಡೆಯನ್ನು ಯಾರು ಬದುಕಿಸಿದರು? ಇವಳನ್ನು ನೋಡಿದ ಮಾತ್ರಕ್ಕೇ ನನ್ನ ಪ್ರಾಣವು ಹತ್ತಿಬರುತ್ತಿರುವುದಲ್ಲಾ! ಏನುಮಾಡಲಿ? ಇನ್ನು ಇಲ್ಲಿರುವುದು ಸರಿಯಲ್ಲ. ಎಲ್ಲಾದರೂ ತಪ್ಪಿಸಿಕೊಂಡು ಓಡಿಹೋಗುವೆನು (ಎಂದು ಓಡಿಹೋಗುವನು.)

ಗೋಹ—ವಸಂತಸೇನೆಗೆ ಯಾರು ಕೆಟ್ಟುದನ್ನು ಮಾಡಿದರೋ ಅವರನ್ನು ಶಿಕ್ಷಿಸಬೇಕೆಂದಲ್ಲವೆ ನಮ್ಮ ದೊರೆಯು ನಮಗೆ ಆಜ್ಞಾಪಿಸಿರುವುದು? ಆದುದರಿಂದ ಶಕಾರನನ್ನು ಹಿಡಿತರುವೆನು. (ಹೋಗುವನು.)

ಚಾರುದತ್ತ—ಇದೇನಾಶ್ಚರ್ಯ? ಈಕೆ ಯಾರು? ವಸಂತಸೇನೆಯಂತೆ ಕಾಣುವಳಲ್ಲಾ! ಅಯ್ಯೋ, ಸ್ವರ್ಗಸ್ಥಳಾದ ವಸಂತಸೇನೆಯು ಪುನಃ ಇಲ್ಲಿಗೆ ಬರುವುವೆಂದರೇನು? ನನಗೆ ಭ್ರಾಂತಿಯೋ? ಅಥವಾ ಅವಳಿಗೆ ಸದೃಶಳಾದ ಮತ್ತೊಬ್ಬ ಯುವತಿಯು ಬಂದಿರುವಳೊ?

ವಸಂತಸೇನೆ—(ಮೇಲಕ್ಕೆದ್ದು) ಆರ್ಯನೆ, ಮತ್ತೊಬ್ಬಳಲ್ಲ. ಯಾರಿಗಾಗಿ ನಿನಗಿಂತಹ ದುರವಸ್ಥೆ ಸಂಭವಿಸಿತೋ ಆ ಪಾಪಿಷ್ಠೆಯೇ ನಾನು.

ಚಾರುದತ್ತ—(ನೋಡಿ) ಹಾ! ಪ್ರಿಯೆ. ನಿನಗಾಗಿಯೇ ಇವರು ನನ್ನನ್ನು ಕೊಲ್ಲುತ್ತಿದ್ದರಲ್ಲಾ! ಈಗ ನಿನ್ನಿಂದಲೇ ನಾನು ಉಜ್ಜೀವಿತನಾದೆನು.

ಕಂದ॥ ಈರಕ್ತಗಂಧಮಾಕರ।
ವೀರಂಗಳಮಾಲೆ ವಧ್ಯಪಟಹಧ್ವನಿಯುಂ॥
ಮಾರಿದಹರ್ಷವನೀವುವು।
ತೋರುತೆವೈವಾಹವಿಧಿಯ ಚಿಹ್ನಂಗಳವೋಲ್॥

ವಸಂತಸೇನೆ—ಆರ್ಯನೆ, ನಿನಗಿಂತಹ ದುರವಸ್ಥೆ ಬರುವುದಕ್ಕೆ ಕಾರಣವೇನು?

ಚಾರುದತ್ತ—ಪ್ರಿಯೆ, ಕೇಳು; ಪೂರ್ವದಿಂದಲೂ ನಮಗೆ ವೈರಿಯಾದ ಶಕಾರನು ನರಕಭೀತಿಯನ್ನೂ ಬಿಟ್ಟು ಚಾರುದತ್ತನೇ ವಸಂತಸೇನೆಯನ್ನು ಕೊಂದನೆಂದು ನನ್ನಲ್ಲಿ ದೋಷವನ್ನು ಸ್ಥಾಪಿಸಿ ಈ ರೀತಿ ಮಾಡಿಸಿದನು.

ವಸಂತಸೇನೆ—ಶಿವಶಿವಾ! (ಕಿವಿಯನ್ನು ಮುಚ್ಚಿಕೊಂಡು) ತಾನೇ ನನ್ನನ್ನು ಕೊಲ್ಲಬೇಕೆಂದು ಪ್ರಯತ್ನಪಟ್ಟು ನಿನ್ನಲ್ಲಿ ದೋಷವನ್ನಾರೋಪಿಸಿದನೇ?

ಚಾರುದತ್ತ—(ಭಿಕ್ಷುವನ್ನು ತೋರಿಸಿ) ಪ್ರಿಯೆ, ಈತನಾರು?

ವಸಂತಸೇನೆ—ಆ ದುಷ್ಟನು ನನ್ನ ಕೊರಲನ್ನು ನುಲಿದು ಮೂರ್ಛೆಯನ್ನುಂಟುಮಾಡಿದ್ದಾಗ ಈ ಮಹಾತ್ಮನೇ ನನ್ನನ್ನು ಬದುಕಿಸಿದವನು.

ಚಾರುದತ್ತ—ಅಯ್ಯಾ, ಅಂತಹ ವಿಪತ್ಕಾಲದಲ್ಲಿ ನಿಷ್ಕಾರಣ ಬಂಧುವಾದೆಯಲ್ಲಾ.

ಭಿಕ್ಷು—ಅಯ್ಯಾ, ನಿನಗೆ ನನ್ನ ಜ್ಞಾಪಕವಿಲ್ಲವೆ? ನಿನ್ನ ಚರಣಸೇವೆಯನ್ನು ಮಾಡುತ್ತಿದ್ದ ಸಂವಾಹಕನೇ ನಾನು. ಜೂಜಿನಲ್ಲಿ ಸೋತ ಹತ್ತು ವರಹಗಳಿಗಾಗಿ ಸಭಿಕಮಾಥುರರಿಬ್ಬರೂ ನನ್ನನ್ನು ಹಿಡಿದುಕೊಂಡರು. ಆಗ ಈಕೆಯು ನಾನು ನಿನ್ನವನೆಂಬ ಅಭಿಮಾನದಿಂದ ಕೈಕಡಗವನ್ನು ಅವರಿಗೆ ಕೊಟ್ಟು ನನ್ನನ್ನು ಬಿಡಿಸಿದಳು. ತರುವಾಯ ಜೂಜಿನಲ್ಲಿ ಜಿಗುಪ್ಸೆ ಹುಟ್ಟಿ ಜೈನಸನ್ಯಾಸಿಯಾದೆನು.

ಶರ್ವಿಳಕ—(ಬಂದು) ಅಯ್ಯಾ, ಆರ್ಯಚಾರುದತ್ತನೆ, ನಮಸ್ಕರಿಸುವೆನು.

ಚಾರುದತ್ತ—ಅಯ್ಯಾ, ನೀನು ಯಾರು?

ಶರ್ವಿಳಕ—ಅಯ್ಯಾ, ಪೂರ್ವದಲ್ಲಿ ನಿಮ್ಮ ಮನೆಗೆ ಕನ್ನಹಾಕಿ ವಸಂತಸೇನೆಯ ಒಡವೆಯನ್ನು ಕದ್ದುಕೊಂಡು ಹೋಗಿದ್ದ ಪಾಪಿಯೇ ನಾನು.

ಚಾರುದತ್ತ—ಅಯ್ಯಾ, ಹಾಗಲ್ಲ, ನೀನು ಮಾಡಿದುದು ಒಳ್ಳೆಯದೇ ಆಯಿತು. (ಆಲಿಂಗಿಸುವನು).

ಶರ್ವಿಳಕ—ಮತ್ತು ಸಚ್ಚರಿತ್ರನಾದ ಆರ್ಯಕನು ಯಜ್ಞಶಾಲೆಯಲ್ಲಿದ್ದ ಪಾಲಕನನ್ನು ಪಶುವನ್ನು ಸಂಹರಿಸುವಂತೆ ಸಂಹರಿಸಿ, ಈ ರಾಜ್ಯಕ್ಕೆ ದೊರೆಯಾದನು.

ಚಾರುದತ್ತ—ಏನು?

ಶರ್ವಿಳಕ—ಪೂರ್ವದಲ್ಲಿ ನಿನ್ನ ರಥವನ್ನು ಹತ್ತಿಬಂದು ಪುಷ್ಪಕರಂಡಕ ಜೀರ್ಣೋದ್ಯಾನದಲ್ಲಿ ಯಾವನು ನಿನಗೆ ಶರಣಾಗತನಾದನೋ ಆತನೇ ಯಜ್ಞಮಂಟಪದಲ್ಲಿ ಪಾಲಕನನ್ನು ಕೊಂದನು.

ಚಾರುದತ್ತ—ಶರ್ವಿಳಕನೆ, ಪಾಲಕನು ನಿಷ್ಕಾರಣವಾಗಿ ಸೆರೆಯಲ್ಲಿಟ್ಟಿದ್ದವನನ್ನು ನೀನು ಬಿಡಿಸಿದೆಯಷ್ಟೆ? ಅದೇ ಆರ್ಯಕನೋ ಪಾಲಕನನ್ನು ಕೊಂದವನು?

ಶರ್ವಿಳಕ—ಅಹುದು.

ಚಾರುದತ್ತ—ಆದರೆ ಬಹು ಸಂತೋಷವಾಯಿತು.

ಶರ್ವಿಳಕ—" ಪೂರ್ವದಲ್ಲಿ ನೀನು ಮಾಡಿದ ಸಾಹಾಯದಿಂದ ನನಗೆ ಈ ರಾಜ್ಯ ಪ್ರಾಪ್ತಿಯಾಯಿತು. ಆದಕಾರಣ ಈಗ ನಾನು ನಿನಗಾಗಿ ಉದ್ದೇಶಿಸಿರುವ ರಾಜ್ಯದಲ್ಲಿ ನೀನು ಸುಖವಾಗಿರಬೇಕು " ಎಂದು ಆರ್ಯಕ ಮಹಾರಾಜನು ವಿಜ್ಞಾಪಿಸಿದನು.

ಚಾರುದತ್ತ—ನಾನು ಮಾಡಿದ ಸಾಹಾಯವೇನು? ದೈವಾಜ್ಞೆ ದೊಡ್ಡದು.

ತೆರೆಯಲ್ಲಿ—ಎಲೋ! ಶಕಾರ! ನಿಲ್ಲು ನಿಲ್ಲು. ಓಡಿಹೋಗುವೆಯಾ? ಈಗ ನಿನ್ನ ಕೆಟ್ಟತನಕ್ಕೆ ತಕ್ಕ ಫಲವನ್ನು ಅನುಭವಿಸು. (ಗೋಹನು ಶಕಾರನನ್ನು ಹಿಂಗಟ್ಟುಕಟ್ಟಿ ಎಳೆತರುವನು).

ಶಕಾರ—ಅಯ್ಯೋ! ಇನ್ನೇನು ಗತಿ! ಗಂಡುಕತ್ತೆಯಹಾಗೆ ನಾನು ಎಷ್ಟುದೂರ ಓಡಿಬಂದರೂ ಇವರು ನನ್ನನ್ನು ಹಿಡಿದುಕೊಂಡು ಹೋಗುವರಲ್ಲಾ! (ಸುತ್ತ ನೋಡಿ) ಅಯ್ಯೋ! ಈ ಹಾಳು ನಗರರಕ್ಷಕರು ಬೇರೆ ಸುತ್ತಲೂ ಮುತ್ತಿಕೊಂಡಿರುವರು. ಈಗ ನನ್ನನ್ನು ಯಾರು ಬಿಡಿಸುವರು? (ಯೋಚಿಸಿ) ಇರಲಿ, ಆ ಧರ್ಮಾತ್ಮನಾದ ಚಾರುದತ್ತನಿಗೇ ಶರಣಾಗತನಾಗುವೆನು. (ಮುಂದೆ ಬಂದು) ಅಯ್ಯಾ, ಆರ್ಯ ಚಾರುದತ್ತನೆ, ನನ್ನನ್ನು ಬದುಕಿಸು. (ನಮಸ್ಕರಿಸುವನು).

ಚಾರುದತ್ತ—ಅಯ್ಯಾ, ಹೆದರಬೇಡ ; ಹೆದರಬೇಡ.

ಶರ್ವಿಳಕ—(ಕೋಪದಿಂದ) ಎಲೋ, ಮೊದಲು ಈ ನೀಚನನ್ನು ಚಾರುದತ್ತನ ಸಮೀಪದಿಂದ ಈಚೆಗೆ ಎಳೆದುಕೊ. ಅಯ್ಯಾ, ಈ ಖೂಳನನ್ನು ಹಗ್ಗಗಳಿಂದ ಕಟ್ಟಿ ಎಳೆಯಿಸೋಣವೋ? ನಾಯಿಗಳಿಂದ ಕಚ್ಚಿಸೋಣವೋ? ಅಥವಾ ಶೂಲಕ್ಕೆ ಹಾಕಿಸೋಣವೋ? ಇಲ್ಲದಿದ್ದರೆ ಗರಗಸದಿಂದ ಕೊಯ್ಯಿಸೋಣವೋ? ಯಾವ ವಿಧವಾದ ಶಿಕ್ಷೆಯನ್ನು ಮಾಡಿಸಬೇಕೋ ಅಪ್ಪಣೆಕೊಡು.

ಚಾರುದತ್ತ—ಅಯ್ಯಾ, ನಾನು ಅಭಯವನ್ನು ಕೊಟ್ಟಿರುವೆನು. ಬಿಟ್ಟುಬಿಡಿ.

ಶಕಾರ—ಸದ್ಯಃ ನಾನು ಬದುಕಿದೆನು. (ಎಂದು ನಗರರಕ್ಷಕರ ಸಂಗಡ ಹೋಗುವನು).

ತೆರೆಯಲ್ಲಿ—ಜನರು ಕಣ್ಣೀರು ಹಾಕುತ್ತಾ ಬೇಡಬೇಡವೆಂದು ತಡೆದರೂ ಲಕ್ಷಿಸದೆ, ಸೆರಗನ್ನು ಹಿಡಿದುಕೊಂಡು ಕಾಲಿಗೆ ತೊಡರುತ್ತಿರುವ ರೋಹಸೇನನನ್ನೂ ಲಾಲಿಸದೆ, ಆರ್ಯಚಾರುದತ್ತನ ಹೆಂಡತಿಯಾದ ಧೂತಾದೇವಿಯು ಚಾರುದತ್ತನ ವಿಪತ್ತಿಗಾಗಿ ಉರಿಯುತ್ತಿರುವ ಬೆಂಕಿಯಲ್ಲಿ ಬೀಳುತ್ತಿರುವಳು! ಇನ್ನೇನು ಗತಿ!

ಚಂದನಕ—(ಪ್ರವೇಶಿಸಿ) ಹಾ! ಪ್ರಮಾದ ಪ್ರಮಾದ! ಧೂತಾದೇವಿಯು ಅಗ್ನಿಪ್ರವೇಶಮಾಡುವಳು! ಮುಂದೇನು ಗತಿ!

ಶರ್ವಿಳಕ—(ಕೇಳಿ) ಯಾರು? ಚಂದನಕನೊ? ಚಂದನಕ, ಇದೇನು?

ಚಂದನಕ—ಅಯ್ಯಾ, ನೀನು ನೋಡಲಿಲ್ಲವೆ? ಈ ಅರಮನೆಯ ದಕ್ಷಿಣಭಾಗದಲ್ಲಿ ಧೂತಾದೇವಿಯು ಚಾರುದತ್ತನ ವಿಪತ್ತನ್ನು ಕೇಳಿ ಸೈರಿಸಲಾರದೆ ಅಗ್ನಿಪ್ರವೇಶಮಾಡಬೇಕೆಂದಿರುವಳು. ಇಂತಹ ದುಃಖಕಾಲದಲ್ಲಿ ಯಾರೇನು ಹೇಳಿದರೂ ನಂಬಿಕೆಯುಂಟಾಗುವುದಿಲ್ಲ.

ಚಾರುದತ್ತ—(ಕೇಳಿ) ಹಾ! ಪ್ರಿಯಳೆ, ನಾನು ಜೀವಂತನಾಗಿದ್ದರೂ ಇದೇನು ಇಂತಹ ಸಾಹಸಕಾರ್ಯವನ್ನು ಮಾಡುವೆ? (ಎಲ್ಲರೂ ಹೋಗುವರು).

(ಸ್ಥಾನ—ಅಗ್ನಿಶಾಲೆ.)

ಧೂತಾದೇವಿ—(ಕಣ್ಣೀರು ಬಿಡುತ್ತಾ)

ರಾಗ ॥ ತೋಡಿ ॥

ಬಿಡುಬಿಡುಬೇಗನೆಬಾಲನೆ । ತಡೆಯದಿರೆನ್ನನ್ನುಬಾಲನೆ ॥ ಅ ॥
ಪತಿಮೃತನಾದರು । ಕ್ಷಿತಿಯೊಳು ಬದುಕಿಹ ।
ಸತಿಯುಪತಿತೆಯಲ್ತೆಬಾಲನೆ ॥ ೧ ॥
ಕರ್ಣಪರುಷವಾದ । ಕಾಂತನಮೃತಿಯನ್ನಾ ।
ಕರ್ಣಿಸಲಾಪೆನೆಬಾಲನೆ ॥ ೨ ॥

ಮಗುವೆ, ನನ್ನನ್ನು ಬಿಡು. ತಡೆಮಾಡಬೇಡ. ಆರ್ಯಪುತ್ರನಿಗೆ ಸಂಭವಿಸುವ ಅಮಂಗಳ ವೃತ್ತಾಂತವನ್ನು ನನ್ನ ಕಿವಿಯಿಂದ ಕೇಳುವಷ್ಟರಲ್ಲಿಯೇ ಜಾಗ್ರತೆ ಮಾಡುವೆನು. (ಅಗ್ನಿಗೆ ನಮಸ್ಕರಿಸುವಳು).

ರೋಹಸೇನ—ತಾಯೇ, ನಾನೂ ನಿನ್ನ ಜತೆಯಲ್ಲಿಯೇ ಅಗ್ನಿ ಪ್ರವೇಶಮಾಡುವೆನು. ನನ್ನನ್ನೂ ಕರೆದುಕೊಂಡು ಹೋಗು. ನಿನ್ನನ್ನು ಬಿಟ್ಟು ನಾನಿರಲಾರೆನು. (ಎಂದು ಸೆರಗನ್ನು ಹಿಡಿದುಕೊಳ್ಳುವನು).

(ಚಾರುದತ್ತ, ವಸಂತಸೇನೆ, ಶರ್ವಿಳಕ, ಸ್ಥಾವರಕ, ಭಿಕ್ಷು, ಶಕಾರ, ಚಂದನಕ, ವೀರಕ, ಭದ್ರಕ, ಅಹಿಂತಕ, ಗೋಹರು ಪ್ರವೇಶಿಸುವರು).

ಚಾರುದತ್ತ—

ಕಂದ॥ ಹಾಹಾ! ಪ್ರಾಣಪ್ರೇಯಸಿ।
ಸಾಹಸಮಂ ಮಾಳ್ಪುದೇಕೆ ನಾಂ ಜೀವಿಸಿರಲ್ ॥
ಆಹರಿದಶ್ವಂ ತೊಳಗಿರೆ।
ಮೋಹದ ಕಮಲಿನಿಯದೇಕೆ ಮುಗಿಗುಂ ಮುಗುದೇ ॥

ವಿದೂಷಕ—(ನೋಡಿ) ಓಹೋ! ಇದೇನು ಈಕೆಯು ಅಗ್ನಿ ಪ್ರವೇಶವನ್ನು ಮಾಡಬೇಕೆಂದು ಉದ್ಯೋಗಿಸಿದ ಮಾತ್ರದಿಂದಲೇ ನಮ್ಮ ಆರ್ಯಚಾರುದತ್ತನು ಪ್ರತ್ಯಕ್ಷನಾದನು. ಇಂತಹ ಸಮಯದಲ್ಲಿ ಬಂದುದು ಎಂತಹ ಸಂವಿಧಾನ! ಮಿತ್ರನೆ, ನಿನಗೆ ವಿಜಯವಾಗಲಿ! (ಎಂದು ಆಲಿಂಗಿಸುವನು).

ಚಾರುದತ್ತ—ಮೈತ್ರೇಯನೇ, ಸುಖವಾಗಿರುವೆಯಾ?

ಧೂತಾದೇವಿ—(ವಸಂತಸೇನೆಯನ್ನು ಆಲಿಂಗಿಸಿಕೊಂಡು) ತಂಗಿ, ದೈವಯೋಗದಿಂದ ನೀನು ಕ್ಷೇಮವಾಗಿರುವೆಯಾ?

ವಸಂತಸೇನೆ—ಈಗ ನನಗೆ ಕ್ಷೇಮವುಂಟಾಯಿತು.

(ಚಾರುದತ್ತನು ರೋಹಸೇನನನ್ನು ಆಲಿಂಗಿಸುವನು).

ರೋಹಸೇನ—ಆಶ್ಚರ್ಯ ಆಶ್ಚರ್ಯ! ನನ್ನನ್ನು ಆಲಿಂಗಿಸಿಕೊಳ್ಳುವನು ನಮ್ಮ ತಂದೆಯೇ? (ಧೂತಾದೇವಿಯೊಡನೆ) ತಾಯೇ, ಇನ್ನು ಅಳಬೇಡ.

ಶರ್ವಿಳಕ—ಆರ್ಯನೆ, ದೈವಾಜ್ಞೆಯಿಂದ ನಿನಗೆ ಬೇಕಾದವರೆಲ್ಲರೂ ಜೀವಂತರಾಗಿ ಬಂದು ಸೇರಿದರು.

ಚಾರುದತ್ತ—ಇದೆಲ್ಲವೂ ನಿಮ್ಮ ಸಂತೋಷ.

ಶರ್ವಿಳಕ--ಆರ್ಯೆ, ವಸಂತಸೇನೆ, ಆರ್ಯಕಮಹಾರಾಜನು ನಿನ್ನ ಸಚ್ಚರಿತ್ರೆಯನ್ನು ಕೇಳಿ ಬಹು ಸಂತೋಷದಿಂದ ನಿನಗೆ 'ವಧೂ' ಶಬ್ದವನ್ನು ಅನುಗ್ರಹಿಸಿರುವನು.

ವಸಂತಸೇನೆ—ನಾನು ಧನ್ಯಳಾದೆನು.

ಶರ್ವಿಳಕ—(ವಸಂತಸೇನೆಗೆ ಮೇಲುಹೊದಿಕೆಯನ್ನು ಹೊದೆಯಿಸಿ) ಅಯ್ಯಾ, ಈ ಜೈನಸನ್ಯಾಸಿಗೆ ಏನುಮಾಡೋಣ ?

ಚಾರುದತ್ತ—ಯತಿಯೇ, ನೀನು ಯಾವುದನ್ನು ಅಪೇಕ್ಷಿಸುವೆ ?

ಭಿಕ್ಷು—ಅಯ್ಯಾ, ಅನಿತ್ಯವಾದ ಈ ಸಂಸಾರದಲ್ಲಿ ನನಗೆ ಅಪೇಕ್ಷೆಯಿಲ್ಲ. ನಾನು ಯತ್ಯಾಶ್ರಮದಲ್ಲೇ ಇರಬೇಕೆಂದು ಅಪೇಕ್ಷಿಸುವೆನು.

ಚಾರುದತ್ತ—ಮಿತ್ರನೆ, ಈತನ ಮನೋನಿಶ್ಚಯವು ಗೊತ್ತಾಯಿತು. ಇನ್ನುಮೇಲೆ ಈತನು ಜೈನರಿಗೆಲ್ಲ ಗುರುವಾಗಿರಲಿ.

ಶರ್ವಿಳಕ—ಈ ಸ್ಥಾವರಕನಿಗೆ ಏನುಮಾಡೋಣ ?

ಚಾರುದತ್ತ—ಇನ್ನುಮೇಲೆ ಅವನು ಮಾಡುತ್ತಿದ್ದ ಸೇವಾವೃತ್ತಿಯನ್ನು ತಪ್ಪಿಸು. ಆ ಚಂಡಾಲರಿಬ್ಬರನ್ನೂ ಚಂಡಾಲರಿಗೆಲ್ಲ ಗೊತ್ತುಗಾರರನ್ನಾಗಿ ಮಾಡು. ಚಂದನಕನು ನಗರರಕ್ಷಕರ ಅಧಿಕಾರಿಯಾಗಿರಲಿ. ಈ ರಾಜಶ್ಯಾಲಕನಾದ ಶಕಾರನು ಪೂರ್ವದ ಉದ್ಯೋಗದಲ್ಲಿಯೇ ಇರಲಿ.

ಶರ್ವಿಳಕ—ಅಯ್ಯಾ, ನೀನು ಹೇಳಿದಂತೆಯೇ ಎಲ್ಲವೂ ಆಗಲಿ. ಈ ನೀಚನನ್ನು ಮಾತ್ರ ಬಿಟ್ಟುಕೊಡು. ಸಂಹರಿಸುವೆನು.

ಚಾರುದತ್ತ—ಶತ್ರುವಾದರೂ ಶರಣಾಗತನಾದುದರಿಂದ ಅವನನ್ನು ಕೊಲ್ಲಲಾಗದು.

ಶರ್ವಿಳಕ—ಅಯ್ಯಾ, ನಿನಗೆ ಇನ್ನಾವ ಪ್ರಿಯವನ್ನು ಮಾಡಲಿ ?

ಚಾರುದತ್ತ—ಈ ಲೋಕದಲ್ಲಿ ನನಗೆ ಬಂದಿದ್ದ ಅಪವಾದವು ಪರಿಹಾರವಾಯಿತು. ಶರಣಾಗತನಾದ ಶತ್ರುವನ್ನು ಬದುಕಿಸಿದುದಾಯಿತು. ಸತ್ಪುರುಷನಾದ ನಿನ್ನ ಮೈತ್ರಿಯು ದೊರೆಯಿತು. ಇನ್ನು ಇದಕ್ಕಿಂತ ಆಗಬೇಕಾದುದೇನು ? ಆದರೂ ಹೀಗೆ ಪ್ರಾರ್ಥಿಸುವೆನು ;

ಕಂದ ॥ ಮಳೆಯಂ ಪರ್ಜನ್ಯಂ ಕರೆ ।
ಗಿಳೆಯೊಂದುಗೆ ಸಕಲಸಸ್ಯವೃದ್ಧಿಯನನಿಶಂ ॥
ನೆಲನೊಡೆಯರ್ ಬಹುಧರ್ಮದೆ ।
ಸಲಪುಗೆ ವಸುಮತಿಯನೊಲವಿನಾಚಂದ್ರಾರ್ಕಂ ॥

(ಎಲ್ಲರೂ ಸೇರಿ ಹೂವೆರಚಿ)

ರಾಗ ॥ ತಾಳ ॥

ಸ್ಥಿರವಾಗಲಿಧರಣೀತಲದೊಳ್ । ನಿರುಪಮರೀದಂಪತಿಗಳ್ ॥ ಪಲ್ಲವಿ ॥
ಪರಮೇಶಕೃಪಾಬಲದಿಂ । ನಿರುಪಾಧಿಕವೈಭವದಿಂ ।
ಪಿರಿದಾಗಿಹಸಂತಸದಿಂ । ಶೋಭಿಸುತ್ತಂ ॥ ೧ ॥
ಪಡೆದಿಂತುಗುಣಾನ್ವಿತರಂ । ಕಡುಚೆಲ್ವನುತಾಳ್ದಿಹರಂ ।
ಪಡಿಯಿಲ್ಲದನಂದನರಂ । ಪಡೆಯುತ್ತಂ ॥ ೨ ॥
ಕಮಲಾಕಮಲಾಕ್ಷರವೋಲ್ । ಹಿಮವತ್ತನುಜೇಶರವೋಲ್ ।
ಸುಮನೋಜ್ಞಶಚೀಂದ್ರರವೋಲ್ । ರಾಜಿಸುತಂ ॥ ೩ ॥

(ಎಂದೆಲ್ಲರೂ ಹೊರಟುಹೋಗುವರು.)

ಇದು
ಸಂಹಾರವೆಂಬ ಹತ್ತನೆಯಂಕಂ.

ಮೃಚ್ಛಕಟಿಕಪ್ರಕರಣಂ ಸಂಪೂರ್ಣಂ.



